# ನಿರಂಜನರ ಕಾದಂಬರಿ ಕಲ್ಯಾಣಸ್ವಾಮಿ ಮತ್ತು ಸ್ಥಳೀಯ ಚರಿತ್ರೆ ಒಂದು ಅಧ್ಯಯನ

ಕನ್ನಡದಲ್ಲಿ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ
ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಸಂಪ್ರಬಂಧ

ಮಾನ್ಯತಾ ಸಂಸ್ಥೆ
ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ ಬಲ್ಮಠ-ಮಂಗಳೂರು
ದ.ಕ.

ಸಂಶೋಧಕರು
ಅರುಣ್

ಮಾರ್ಗದರ್ಶಕರು:
ಡಾ। ಗಿರೀಶ್ ಭಟ್ ಎ.,
ಸಹಪ್ರಾಧ್ಯಾಪಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು, ಬಂಟ್ವಾಳ
ಮಂಗಳೂರು, ದ.ಕ.



ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬
ಜುಲೈ - ೨೦೧೩

# ನಿರಂಜನರ ಕಾದಂಬರಿ ಕಲ್ಯಾಣಸ್ವಾಮಿ ಮತ್ತು ಸ್ಥಳೀಯ ಚರಿತ್ರೆ ಒಂದು ಅಧ್ಯಯನ

ಕನ್ನಡದಲ್ಲಿ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ
ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಸಂಪ್ರಬಂಧ

<u>ಮಾನ್ಯತಾ ಸಂಸ್ಥೆ</u>

ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ ಬಲ್ಮಠ-
ಮಂಗಳೂರು ದ.ಕ.

**ಸಂಶೋಧಕರು**

**ಅರುಣ್**

**ಮಾರ್ಗದರ್ಶಕರು:**

**ಡಾ। ಗಿರೀಶ್ ಭಟ್ ಎ.,**

ಸಹಪ್ರಾಧ್ಯಾಪಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು, ಬಂಟ್ವಾಳ
ಮಂಗಳೂರು, ದ.ಕ.

**ಕನ್ನಡ ವಿಶ್ವವಿದ್ಯಾನಿಲಯ, ಹಂಪಿ**

ವಿದ್ಯಾರಣ್ಯ – ೫೮೩೨೭೬

ಜುಲೈ – ೨೦೧೩

# ದೃಢೀಕರಣ ಪತ್ರ

**'ನಿರಂಜನರ ಕಾದಂಬರಿ 'ಕಲ್ಯಾಣಸ್ವಾಮಿ ಮತ್ತು ಸ್ಥಳೀಯ ಚರಿತ್ರೆ – ಒಂದು ಅಧ್ಯಯನ'** ಇದು ನಾನು ಮಂಗಳೂರು ಬಲ್ಮಠದ ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ। ಗಿರೀಶ್ ಭಟ್ ಎ. ಇವರ ಮಾರ್ಗದರ್ಶನದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಿದ್ಧ ಪಡಿಸಿದ ನಿಬಂಧವಾಗಿರುತ್ತದೆ. ಇದು ನನ್ನ ಮೂಲ ಮತ್ತು ಸ್ವತಂತ್ರ ರಚನೆಯಾಗಿದ್ದು, ಇದರ ಯಾವುದೇ ಭಾಗ ಎಲ್ಲೂ ಪ್ರಕಟವಾಗಿಲ್ಲ ಮತ್ತು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಮಂಗಳೂರು
ಜುಲೈ ೨೦೧೩

**ಅರುಣ್**
**(ಸಂಶೋಧಕರು)**

# ಪ್ರಮಾಣ ಪತ್ರ

**'ನಿರಂಜನರ ಕಾದಂಬರಿ 'ಕಲ್ಯಾಣಸ್ವಾಮಿ ಮತ್ತು ಸ್ಥಳೀಯ ಚರಿತ್ರೆ – ಒಂದು ಅಧ್ಯಯನ"** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ ಅರುಣ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಪ್ರಬಂಧವು ಮೂಲರೂಪವಾಗಿದ್ದು, ಇದರ ಯಾವುದೇ ಭಾಗ ಎಲ್ಲೂ ಪ್ರಕಟವಾಗಿಲ್ಲ ಮತ್ತು ಈ ಮೊದಲು ಯಾವುದೇ ಪದವಿಗಾಗಿ ಇದನ್ನು ಸಲ್ಲಿಸಿರುವುದಿಲ್ಲ ಎಂಬುವುದಾಗಿ ಈ ಮೂಲಕ ಪ್ರಮಾಣೀಕರಿಸುತ್ತೇನೆ

ಬಂಟ್ವಾಳ, ಮಂಗಳೂರು

ಜುಲೈ – ೨೦೧೩

**ಡಾ। ಗಿರೀಶ್ ಭಟ್ ಎ.**

**(ಮಾರ್ಗದರ್ಶಕರು)**

# ಅನುಕ್ರಮಣಿಕೆ

# ಅಧ್ಯಾಯ – ೧

# ಅಧ್ಯಯನದ ವ್ಯಾಪ್ತಿ, ವಿಷಯ, ಪ್ರಸ್ತುತತೆ, ವಿಧಾನಗಳು ಮತ್ತು ಉದ್ದೇಶ

ತನ್ನ ಪರಿಸರದ ಅನುಭವಗಳನ್ನು ಸೃಜನಶೀಲ ಬರಹಗಾರನೊಬ್ಬ ಬರವಣಿಗೆಯ ಮೂಲಕ ಅಭಿವ್ಯಕ್ತಿ ಪಡಿಸುತ್ತಾನೆ. ಈ ಅನುಭವಗಳು ತತ್ಪೂರ್ವದ ಹಾಗೂ ತನ್ನ ಸಮಕಾಲೀನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಐತಿಹಾಸಿಕ ವಿಷಯಗಳಿಂದ ಪ್ರಭಾವಿತವಾದುವು. ಈ ಹಿನ್ನಲೆಯಿಂದ ಲಕ್ಷ್ಯಿಸಿದರೆ ಇತಿಹಾಸವೆಂಬುದು ಸಾಹಿತ್ಯಕ್ಕೆ ಅಪಾರ ಅನುಭವದಾಯಕ ವಿಷಯವಾಗಿ, ನೇರ ಸಂಬಂಧವನ್ನು ಬೆಸೆದುಕೊಂಡಿದೆ.

'ಇತಿಹಾಸ'ವೆಂದರೆ 'ಗತಕಾಲದಲ್ಲಿ ನಡೆದ ಅಪೂರ್ವ ಘಟನೆಗಳ ದಾಖಲೆ' ಎಂಬುದು ಚರಿತ್ರೆಕಾರರು ನೀಡುವ ಸರಳ ವ್ಯಾಖ್ಯೆ.

"History ಎಂಬ ಆಂಗ್ಲ ಪದಕ್ಕೆ ಸಂವಾದಿಯಾಗಿ ಇಂದು 'ಇತಿಹಾಸ' ಮತ್ತು 'ಚರಿತ್ರೆ' ಎಂಬ ಎರಡು ಪದಗಳನ್ನು ಬಳಸಲಾಗುತ್ತಿದೆ. ಆದರೆ ಪ್ರಾಚೀನ ಸಂದರ್ಭದಲ್ಲಿ ಇವು ಬೇರೆ ಬೇರೆ ಅರ್ಥದಲ್ಲಿ ಬಳಕೆಯಾಗಿವೆ. ಇಡೀ ಒಂದು ಸಮುದಾಯದ ಏಳುಬೀಳುಗಳನ್ನು ಕುರಿತ ಇತಿವೃತ್ತವೇ ಇತಿಹಾಸವಾದರೆ, ಒಂದು ವಂಶದ ಅಥವಾ ಒಬ್ಬ ವ್ಯಕ್ತಿಯ ಏಳುಬೀಳುಗಳನ್ನು, ಸಾಧನೆಗಳನ್ನು ನಿರೂಪಿಸುವುದು ಚರಿತ್ರೆಯಾಗುತ್ತದೆ. 'ಇತಿಹಾಸ' ಕೃತಿಗಳ ರಚನೆ ಕ್ರಿ.ಪೂ ೪೦೦ ರಿಂದ ಕ್ರಿ.ಶ. ೪೦೦ರ ನಡುವಿನ ಅವಧಿಯಲ್ಲಿ ನಡೆದಿದೆ. ನಂತರದ ಕಾಲದಲ್ಲಿ ಬಂದವು ಚರಿತ್ರೆಗಳೇ ಆಗಿವೆ. ಚರಿತ್ರೆಗಳಲ್ಲಿಯೂ ಇಡೀ ವಂಶದ ಇತಿವೃತ್ತವನ್ನು ಹೇಳುವ ಮತ್ತು ಅರಸನೊಬ್ಬನ ಇತಿವೃತ್ತವನ್ನು ಹೇಳುವ ಎರಡು ರೀತಿಗಳನ್ನು ಗುರುತಿಸಬಹುದು. ಇಡೀ ಸಮೂದಾಯದ ಸ್ಥಿತಿಗತಿಗಳನ್ನು ಏಳುಬೀಳುಗಳ ಇತೀವೃತ್ತವನ್ನು ತಿಳಿಸುವ 'ಇತಿಹಾಸ'ವೇ ಪರಿಮಿತಿಗೊಂಡು ಚರಿತ್ರೆಗಳಾದವು". [೧]

'ಇತಿಹಾಸ'ವೆಂಬುದು ಗತವನ್ನು ಸಮಷ್ಟಿಯ ನೆಲೆಯಲ್ಲಿ ಗ್ರಹಿಸಿದರೆ, ಚರಿತ್ರೆ ಅದನ್ನು ಬಿಡಿಬಿಡಿಯಾಗಿ ಗ್ರಹಿಸುತ್ತದೆ.

ಚರಿತ್ರೆಯ ಘಟನೆಗಳು ಸಹಜವಾಗಿ ಪುನರ್‌ಘಟಿಸುವುದು ಒಂದು 'ಸಾಧ್ಯತೆ' (Possibility). ಆದರೆ, ಆ ಘಟನೆಯನ್ನು ಪ್ರತಿಭಾ ಶಕ್ತಿಯಿಂದ ಪುನರ್ ರಚಿಸುವುದೂ ಸಾಧ್ಯವಿದೆ. ಇದಕ್ಕೆ ವಿನಿಯೋಗಗೊಳ್ಳುವ ಮಾಧ್ಯಮಗಳು ಬಹುವಿಧವಾಗಿರಬಹುದು. ಸಾಹಿತ್ಯವೂ ಅವುಗಳಲ್ಲಿ ಮುಖ್ಯವಾದುದು. ಸಾಹಿತ್ಯದ

ವಿವಿಧ ಪ್ರಕಾರಗಳ ಪೈಕಿ, 'ಕಾದಂಬರಿ' ಎಂಬುದು ಈ ಇತಿಹಾಸದ ಘಟನೆ ಮತ್ತು ಕಥಾನಕಗಳ ಪುನರ್ ಸೃಷ್ಟಿಗೆ ವ್ಯವಸ್ಥಿತವಾದದ್ದಾಗಿದೆ. ಹೀಗೆ ಇತಿಹಾಸದ ಆಗು ಹೋಗುಗಳನ್ನು ಆಧಾರ ಮತ್ತು ಆಕರವನ್ನಾಗಿ ಇಟ್ಟುಕೊಂಡು ರೂಪುಗೊಳ್ಳುವ ಕಾದಂಬರಿಗಳು 'ಐತಿಹಾಸಿಕ ಅಥವಾ ಚಾರಿತ್ರಿಕ ಕಾದಂಬರಿ'ಗಳೆನಿಸುತ್ತವೆ.

"ಲೇಖಕನೊಬ್ಬ ಇತಿಹಾಸದ ವ್ಯಕ್ತಿಗಳು, ಘಟನೆಗಳನ್ನು ವಸ್ತುವಾಗಿಸಿಕೊಂಡು ಕೃತಿ ರಚನೆ ಮಾಡ ಹೊರಟಾಗ, ವಸ್ತು ಇತಿಹಾಸದ್ದು ಎಂಬ ಕಾರಣಕ್ಕೆ ಅವನ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಒಂದು ಬಗೆಯ ನಿರ್ಬಂಧ ಅಥವಾ ಮಿತಿ ತಂತಾನೇ ಏರ್ಪಡುತ್ತದೆ ಎಂಬುದು ಸ್ಪಷ್ಟ. ಅವನು ತನ್ನ ಕೃತಿಯನ್ನು ಬರಿಯ ಇತಿಹಾಸವಾಗಿಸುವುದೂ ಅಲ್ಲ. ಬರಿಯ ಸಾಹಿತ್ಯವಾಗಿಸುವುದೂ ಸಲ್ಲ. ಏಕೆಂದರೆ ಆ ಕೃತಿ ಕೇವಲ ಇತಿಹಾಸವಾದರೆ ನೀರಸವಾಗುತ್ತದೆ, ಕೇವಲ ಸಾಹಿತ್ಯವಾದರೆ ಇತಿಹಾಸಕ್ಕೆ ಹೊರತಾಗುತ್ತದೆ. ಹಾಗಾಗಿ ಅದು ಇತಿಹಾಸದ ನಿರ್ದಿಷ್ಟ ವಿವರಗಳ ಜತೆಗೆ ಸಾಹಿತ್ಯದ ಕಲಾತ್ಮಕತೆ ಸೇರಿದ ಒಂದು ಅಪರೂಪದ ಸೃಷ್ಟಿಯಾಗಬೇಕಾಗುತ್ತದೆ. ಅಂದರೆ ಅಂಥ ಸಾಹಿತ್ಯ ಇತಿಹಾಸದ ಕಲಾತ್ಮಕ ರೂಪವಾಗುತ್ತದೆ." [೨]

"ಕಾದಂಬರಿಕಾರನು ಜೀವನದ ಅಂತರಂಗದ ಅಭಿವ್ಯಕ್ತಿಗೆ ಪ್ರಯತ್ನಿಸಿದರೆ, ಇತಿಹಾಸಕಾರನು ಬಹುರ್ಘಟನೆಗಳ ಆಧಾರದ ಮೇಲೆ ತನ್ನ ಇತಿಹಾಸವನ್ನು ನಿರ್ಮಿಸುತ್ತಾನೆ. ಇವರಿಬ್ಬರ ಮೂಲ ಸಾಮಾಗ್ರಿ ಜನಜೀವನವೇ ಆದರೂ ಅದನ್ನು ಬಳಸಿಕೊಳ್ಳುವ ರೀತಿಯಲ್ಲಿ ಇತಿಹಾಸ ಮತ್ತು ಕಾದಂಬರಿಗಳಲ್ಲಿನ ಭಿನ್ನತೆ ಎದ್ದು ಕಾಣುತ್ತದೆ". [೩]

"ಒಂದು ಜನಾಂಗದ, ಒಂದು ಸಂಸ್ಕೃತಿಯ, ಒಂದು ರಾಷ್ಟ್ರದ ಸಮಗ್ರ ಇತಿಹಾಸವನ್ನು ಅದು ಇರುವ ಸ್ವರೂಪದಲ್ಲೇ ಕಟ್ಟಿಕೊಡುವ ಕೆಲಸವು ತುಂಬ ಕಠಿಣವಾದುದು ಮತ್ತು ಪ್ರಾಮಾಣಿಕತೆಯನ್ನು ಬಯಸುವಂಥದ್ದು. ಇದರಲ್ಲಿ ಒಂದು ವ್ಯಕ್ತಿಯ, ಮನೆತನದ, ಊರಿನ, ಜನಾಂಗಗಳ, ಪ್ರದೇಶಗಳ ಏಳು–ಬೀಳು, ಸೋಲು–ಗೆಲುವು, ವಿಶಿಷ್ಟತೆಗಳು ಸಮಾನ ಸ್ಥಾನವನ್ನು ಪಡೆಯಬೇಕು. ಆಯಾಯ ಸ್ಥಳಗಳಿಗೆ ಹೋಗಿ ಆಯಾ ಜನಾಂಗಗಳ, ಸಂಸ್ಕೃತಿಗಳ, ವಿವಿಧ ವಯೋಮಾನದ, ಅನುಭವಶೀಲ ವಕ್ತೃಗಳೊಡನೆ ಬೆರೆತು, ಅಭಿಪ್ರಾಯ ವಿನಿಮಯ ಮಾಡಿಕೊಂಡು ಸ್ವತಃ ಅವುಗಳನ್ನು ಕೂಲಂಕಷವಾಗಿ ಪರಿಶೀಲಿಸಬೇಕು. ಅವುಗಳ ಬೆನ್ನೆಲುಬಾಗಿ ಉಳಿದಿರಬಹುದಾದ ಕಣ್ಣತ್ಯಗಳನ್ನು ಶೋಧಿಸಬೇಕು. ವಿವಿಧ ಕಾಲಘಟ್ಟಗಳ ಚರಿತ್ರೆಯನ್ನು ಯಾವುದೇ ಜಾತಿ, ಪಂಗಡ, ಭಾಷೆ, ಸಾಮಾಜಿಕ ಸ್ತರಗಳ ಹಂಗಿಗೆ ಒಳಗಾಗದಂತೆ ಜಾಗ್ರತೆವಹಿಸಿ ವೈಜ್ಞಾನಿಕವಾಗಿ, ನಿಷ್ಪಕ್ಷಪಾತವಾಗಿ ದಾಖಲಿಸುವ ಸಲುವಾಗಿಯೇ ವಿಷಯ ಸಂಗ್ರಹಿಸಬೇಕು. ಅವುಗಳ ಮೂಲಕ ಅತಿ ಎಚ್ಚರದಿಂದ

ಕಟ್ಟಿಕೊಡುವ ವಿವರಗಳೇ 'ಸ್ಥಳೀಯ ಚರಿತ್ರೆ' ಎನಿಸಿಕೊಳ್ಳುತ್ತದೆ. ಇತಿಹಾಸದ ವ್ಯಕ್ತಿ ನಿಷ್ಠೆ ಬರವಣಿಗೆಗಳ ನಡುವೆ ಅಪಿತಿರುವ ಚರಿತ್ರೆಯ ಬಹುಸೂಕ್ಷ್ಮವೂ, ಅಜ್ಞಾತವೂ ಆದ ಸಂಗತಿಗಳನ್ನು ಸತ್ಯಗಳನ್ನು ಸಂಗ್ರಹಿಸುವ ಮೂಲಕ ವಿವಿಧ ನಿರ್ಲಕ್ಷಿತ ಘಟಕಗಳ (ಸ್ಥಳಗಳ) ಚರಿತ್ರೆಯನ್ನು ಕಟ್ಟಿಕೊಡುವ, ಇವುಗಳಿಂದ ಚರಿತ್ರೆಯ ಸಮಗ್ರತೆಯನ್ನು, ಜೀವಂತಿಕೆಯನ್ನು, ವಿಶ್ವಾಸಾರ್ಹತೆಯನ್ನು ಹೆಚ್ಚಿಸುವ ಪ್ರಯತ್ನವಾಗಿ ಇಂದು ಪ್ರಾದೇಶಿಕ ಅಧ್ಯಯನಗಳು ರೂಪುಗೊಳ್ಳುತ್ತಿವೆ." [೪]

ನಮ್ಮ "ಇತಿಹಾಸಕಾರರು ಸತ್ಯಕ್ಕೆ ಸಂಪೂರ್ಣ ನಿಷ್ಠರಾಗಿರುತ್ತಾರೆ ಎಂದು ಇತಿಹಾಸಕಾರರೂ ಹೇಳುವುದಿಲ್ಲ. ಇತಿಹಾದ ಬಗ್ಗೆ ಮಾತನಾಡುವಾಗ, ಅಥವಾ ಬರೆಯುವಾಗ ಸತ್ಯಗಳಿಗೆ ಸಂಪೂರ್ಣವಾಗಿ ನಿಷ್ಠರಾಗಿರಲು ಇತಿಹಾಸಕಾರರಿಗೆ ಸಮಸ್ಯೆಗಳೇನು ಎಂಬ ಪ್ರಶ್ನೆಗೆ ಇತಿಹಾಸಕಾರರೇ ಉತ್ತರಿಸಲು ಪ್ರಯತ್ನಿಸಿದ್ದಿದೆ.

ಇತಿಹಾಸದ ಬಗ್ಗೆ ದಾಖಲೆಗಳು ತಿಳಿಸುವ ಸತ್ಯವನ್ನು ಒಪ್ಪಿಕೊಳ್ಳಲು ಇರುವ ಕಷ್ಟವೇನು? ಎಂದರೆ ವರ್ತಮಾನದಲ್ಲಿ ನಿರ್ದಿಷ್ಟ ನಿಲುವುಗಳಿಗೆ, ವಾಸ್ತವಗಳಿಗೆ ಬದ್ಧರಾದವರಿಗೆ ಕೆಲವು ಸತ್ಯಗಳನ್ನು ಒಪ್ಪಿಕೊಳ್ಳಲು ಸುಲಭ ಹಾಗೂ ಇನ್ನು ಕೆಲವನ್ನು ಒಪ್ಪಿಕೊಳ್ಳಲು ಕಷ್ಟವಾಗುತ್ತದೆ ಎನ್ನಬಹುದು." [೫]

ಇತಿಹಾಸದಂತೆಯೇ ಅದರ ಸತ್ಯವೂ ನಿಶ್ಚಿತವಾದ ಗತಕ್ಕೆ ಸೀಮಿತವಲ್ಲ. ಎಸ್.ಎಲ್.ಭೈರಪ್ಪನವರ ಪ್ರಕಾರ ಸತ್ಯಶೋಧನೆಯ ಮತ್ತು ಸತ್ಯದ ಅಭಿವ್ಯಕ್ತಿಯ ಹೊರತು ಇತಿಹಾಸಕ್ಕೆ ಅಸ್ಥಿತ್ವವಿಲ್ಲ. [೬]

"ಸತ್ಯವಾದ ವಿಚಾರಗಳೇ ಇತಿಹಾಸ ಮತ್ತು ಇತಿಹಾಸವು ಸತ್ಯವೇ ಆಗಿರಬೇಕು. ಅಸತ್ಯವಾದ ಮತ್ತು ಕಲ್ಪನೆಯ ಯಾವ ವಿಚಾರಗಳೂ ಇತಿಹಾಸದ ವ್ಯಾಪ್ತಿಗೆ ಸೇರುವುದು ಸಾಧ್ಯವೇ ಇಲ್ಲ.........ಇಂದಿನ ಇತಿಹಾಸಕಾರ ಹಿಂದೆ ನಡೆದುಹೋದ ಘಟನೆಗಳು ಮತ್ತು ಲಭಿಸಿರುವ ದಾಖಲೆಗಳ ಜೊತೆಗೆ ನಡೆಸುವ ಸಂವಾದವು ಇತಿಹಾಸವಾಗಿ ಮುಂದಿನ ಪೀಳಿಗೆಗೆ ಮಾರ್ಗದರ್ಶನ ನೀಡಬೇಕು" [೭]

"ಇತಿಹಾಸವೆನ್ನುವುದು ರಾಜರಾಣಿಯರ ಕಥೆ ಎಂಬ ಸಾಮಾನ್ಯ ಕಲ್ಪನೆಯೊಂದುಂಟು. ಅದು ಸರಿಯಲ್ಲ. ಒಬ್ಬ ರಾಜ ಇನ್ನೊಬ್ಬ ರಾಜನ ಮೇಲೆ ಸಾರಿದ ಯುದ್ಧ, ಒಬ್ಬನನ್ನು ಪದಚ್ಯುತಗೊಳಿಸಲು ಮತ್ತೊಬ್ಬ ನಡೆಸಿದ ಯತ್ನ, ಕುಟಿಲ ಕಾರಸ್ಥಾನಗಳು, 'ವಿಶಿಷ್ಟ'ರೆನಿಸಿದ ಆ ವ್ಯಕ್ತಿಗಳ ಸುಖ-ದುಃಖ ಬರಿಯ ಈ ವಿವರ ಇತಿಹಾಸವೆನಿಸದು. ಕಾಲಕಾಲಕ್ಕೂ ಬದಲಾಗುತ್ತ ಬಂದು ಬದುಕು, ಆಗಿನ ಕಾಲ, ಧರ್ಮ, ಅದರಿಂದ ಪ್ರಭಾವಿತರಾದ ಜನರ ರೀತಿನೀತಿಗಳು, ಆ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಶಕ್ತಿಗಳು - ಇವು ಇತಿಹಾಸವನ್ನು ರೂಪಿಸುವ ಮುಖ್ಯ ಅಂಶಗಳು. ಸಾಮ್ರಾಜ್ಯಗಳು ಎದ್ದುವು, ಬಿದ್ದುವು. ಆ ಉತ್ಕರ್ಷ ಅಧಃಪತನಗಳಿಗೆ

ಒಬ್ಬ ರಾಜ ಇಲ್ಲವೆ ರಾಣಿ ಮಾತ್ರ ಕಾರಣ ಎನ್ನುವುದು ಸರಿಯಾಗದು. ಈ ಸೃಷ್ಟಿಯ-ಲಯದ ಹಿಂದೆ, ಆಯಾ ಜನಾಂಗಗಳ ಕಥೆ ಇದೆ. ಆ ಘಟನೆಗಳ ಹಿಂದೆ, ಜನಜೀವನದ-ಸಂಸ್ಕೃತಿಯ-ಸಾಹಿತ್ಯದ ಪ್ರೇರಕ ಶಕ್ತಿಗಳಿವೆ". [೮]

"ಭಾರತ ದೇಶವನ್ನು ಕಟ್ಟುವಲ್ಲಿ ಮತ್ತು ಭಾರತೀಯ ರಾಷ್ಟ್ರೀಯ ಸಂವೇದನೆಯ ಬೆಳವಣಿಗೆಯಲ್ಲಿ ವಸಾಹತುಶಾಹಿ ಹಾಗೂ ಬೂರ್ಜ್ವಾ ಎಲಿಟಿಸಂಗಳಿಂದ ರೂಪಿಸಲ್ಪಟ್ಟ ಪೂರ್ವಗ್ರಹಗಳ ಪಾತ್ರ ಮಹತ್ವದ್ದಾಗಿದೆ. ಒಂದು ರೀತಿಯಲ್ಲಿ ಈ ಬಗೆಯ ರಾಷ್ಟ್ರೀಯತೆಯ ಪ್ರಕ್ರಿಯೆಯು ಮೂಲಭೂತವಾಗಿ "ಎಲೈಟ್‌ಗಳ" ಸಾಧನೆಗಳು ಎಂದು ಬಿಂಬಿಸಲ್ಪಟ್ಟವು. ವಸಾಹತುಶಾಹಿ ಮತ್ತು ನವ ವಸಾಹತುಶಾಹಿ ಚರಿತ್ರೆ ಬರವಣಿಗೆಗಳು ಬ್ರಿಟಿಷ್ ಆಳರಸರ, ಆಡಳಿತಗಾರರ, ಬ್ರಿಟಿಷ್ ನಿಯಮಗಳ, ಸಂಸ್ಥೆಗಳ ಮತ್ತು ಸಂಸ್ಕೃತಿಗಳ ಸಾಧನೆಗಳನ್ನು ಈ ಮೂಲಕ ಬಿಂಬಿಸಿದವು. ಅದೇ ರೀತಿಯಲ್ಲಿ ರಾಷ್ಟ್ರೀಯವಾದಿ ಮತ್ತು ನವರಾಷ್ಟ್ರೀಯವಾದಿ ಬರವಣಿಗೆಗಳು ಭಾರತದ ಉಚ್ಚವರ್ಗದ ವ್ಯಕ್ತಿತ್ವಗಳನ್ನು, ಸಂಸ್ಥೆಗಳನ್ನು, ಕಾರ್ಯಚಟುವಟಿಕೆಗಳನ್ನು ಮತ್ತು ಬೌದ್ಧಿಕತೆಯನ್ನು ಭಾರತದ ಚರಿತ್ರೆಯೆಂದು ಮತ್ತು ಅದನ್ನೇ ಭಾರತದ ರಾಷ್ಟ್ರೀಯತೆ ಎಂದು ಬಿಂಬಿಸಿದವು." [೯]

"ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಅಂಚಿಗೆ ತಳ್ಳಲ್ಪಟ್ಟಂತಹ ಸಮುದಾಯಗಳ ಸಂಸ್ಕೃತಿ, ಚರಿತ್ರೆ, ಸಾಹಿತ್ಯ, ಭಾಷೆ ಎಂಬಿತ್ಯಾದಿ ನೆಲೆಗಳನ್ನು ಕುರಿತ ಓದುಗಳು ಭಾರತದಲ್ಲಿ ಮುಂಚೂಣಿಗೆ ಬಂದವು. ಸಂಸ್ಕೃತಿ ಕುರಿತ ಓದಿಗೆ ಸಂಬಂಧಿಸಿದಂತೆ ಈ ನಡೆಯೊಂದು ಗಮನಾರ್ಹವಾದ ಬೆಳವಣಿಗೆಯೆಂದೇ ಗುರುತಿಸಿಕೊಂಡಿದೆ. ಇದನ್ನು ಸಂಸ್ಕೃತಿ ಕುರಿತ ಆಲೋಚನಾಕ್ರಮದಲ್ಲಾದ ಪಲ್ಲಟವೆಂದೂ ಅಂದುಕೊಳ್ಳಲಾಗಿದೆ. ದಿಟ, ಅಲಕ್ಷಿತ ಸಮುದಾಯಗಳ ಗುರುತಿನ ನೆಲೆಗಳನ್ನು ಅರಿಯುವ ಈ ಬಗೆಗೆ ಚಾರಿತ್ರಿಕ ಮಹತ್ವ ತನ್ನಷ್ಟಕ್ಕೇ ಸಿಕ್ಕಿರುವುದು, ಆ ಸಮುದಾಯಗಳ ಅಸ್ಥಿತ್ವದ ಬಗೆಗಿನ ಕಾಳಜಿಗೆ ಸಂಬಂಧಿಸಿದ್ದು ಎಂಬ ನಂಬಿಕೆಯೂ ಭಾರತ ಮತ್ತು ಅಂತಾರಾಷ್ಟ್ರೀಯ ವಿದ್ವತ್ ವಲಯದಲ್ಲಿ ಆಳವಾಗಿ ಬೇರೂರಿದೆ. ಸಬಾಲ್ಟರ್ನ್ ಓದು ಎಂಬ ಹೊಸ ಅಲೆಯ ಚಿಂತನಾಕ್ರಮವು ಆಲೋಚನಾ ಕ್ರಮದಲ್ಲಾದ ಪಲ್ಲಟ ಎನ್ನುವುದಕ್ಕಿಂತ ಸಂಸ್ಕೃತಿ ಓದಿನಲ್ಲಿ ಒಂದು ತಂತ್ರವಾಗಿ (ಸ್ಟ್ರಾಟಜಿ) ರೂಪುಗೊಂಡಿದ್ದೆ ಹೆಚ್ಚು." [೧೦]

"ಸಬಾಲ್ಟರ್ನ್ ಎಂಬುದು ಕೇವಲ ದಮನಿತ ವರ್ಗವನ್ನು, ಇತರರನ್ನು ಒಂದು ಬಿಡಿಗಾಸಿಗೂ ಗತಿಯಿಲ್ಲದವರನ್ನು ಸೂಚಿಸುವಂತಹದಲ್ಲ. ವಸಾಹತೋತ್ತರ ಚಿಂತನೆಯ ಪ್ರಕಾರ ಎಲ್ಲಾ ರೀತಿಯಿಂದಲೂ ಯಾರು ಸಾಂಸ್ಕೃತಿಕ ಸಾಮ್ರಾಜ್ಯಶಾಹಿಯ ಯಾವುದೇ ಬಗೆಯ ಅಡರ್‍ಪಾಡಿನ (ರೆಪ್ರೆಸೆಂಟೇಶನ್) ಅವಕಾಶಗಳಿಂದ ವಂಚಿತರಾಗಿರುವವರೋ ಇಲ್ಲವೇ ಅಂತಹ ಆವರಣದೊಳಗೆ

ಯಾರಿಗೆ ಯಾವುದೇ ಬಗೆಯ ದಾರಿ ಇರುವುದಿಲ್ಲವೋ ಅವರನ್ನು ಸಬಾಲ್ಟರ್ನ್ ಎಂದು ಕರೆಯಬಹುದು." [೧೧]

ರಾಜ್ಯ ಕೇಂದ್ರಿತ ಅಥವಾ ರಾಜ ಕೇಂದ್ರಿತ ಅಧ್ಯಯನಗಳು ೧೯೭೦ರ ದಶಕದಲ್ಲಿ ವಿನಾಶವಾಗುತ್ತಿದ್ದ ಸಂದರ್ಭದಲ್ಲಿ ನಮ್ಮ ಸಮಾಜ ಚರಿತ್ರೆಯನ್ನು 'ತಳದಿಂದ ನೋಡುವ' ವಿಮರ್ಶಿಸುವ ಅಧ್ಯಯನಗಳು ಬೆಳಕಿಗೆ ಬಂದವು. "ಶಾಹಿದ್ ಅಮೀನ್, ಡೇವಿಡ್ ಅರ್ನಾಲ್ಡ್, ಪಾರ್ಥ ಚಟರ್ಜಿ, ಡೇವಿಡ್ ಹರ್ಡಿಮನ್, ಗ್ಯಾನೇಂದ್ರ ಪಾಂಡೆ ಇವರನ್ನು ಒಳಗೊಂಡ ವಿದ್ವಾಂಸರ ಗುಂಪು ರಣಜಿತ್ ಗುಹಾ ಅವರ ನೇತೃತ್ವದಲ್ಲಿ ಭಾರತದ 'ಸ್ವಾತಂತ್ರ್ಯ ಹೋರಾಟದಲ್ಲಿ' ಕೇವಲ 'ಗಣ್ಯವ್ಯಕ್ತಿಗಳ' (ಎಲೈಟ್) ಕಾಣಿಕೆಗಳನ್ನು ಮಾತ್ರ ವೈಭವೀಕರಿಸುತ್ತ ಭಾರತದ ರಾಷ್ಟ್ರೀಯ ಚರಿತ್ರೆಯನ್ನು ನಿರ್ವಚಿಸುವ ಪ್ರಯತ್ನಗಳಿಗೆ ತೀವ್ರವಾದ ಆಕ್ಷೇಪಗಳನ್ನೆತ್ತಿದರು. ಇದರಲ್ಲಿ 'ಸಾಮಾನ್ಯ ಜನರ ರಾಜಕಾರಣ'ವನ್ನು ಉಪೇಕ್ಷೆ ಮಾಡಿದ್ದರ ಬಗ್ಗೆ ಅವರು ಕ್ರೋಧವನ್ನು ವ್ಯಕ್ತಪಡಿಸಿದರು. ಒಂದರ್ಥದಲ್ಲಿ 'ಸಾಂಪ್ರದಾಯಿಕ ಮಾರ್ಕ್ಸಿಸಂ' ಅನ್ನು ವಿಮರ್ಶಿಸುತ್ತಾ ಮತ್ತು ಕೇಂಬ್ರಿಡ್ಜ್ ಪಂಥದ ನಿಲುವನ್ನು ನಿರಾಕರಿಸುತ್ತಲೇ ಬೆಳೆದ ಹೊಸ ಪಂಥವನ್ನು 'ಸಬಾಲ್ಟರ್ನ್ ಸ್ಟಡೀಸ್' ಎನ್ನಬಹುದು" [೧೨]

"ಸಬಾಲ್ಟರ್ನ್ ಓದು ಎಂಬುದು ಕೇವಲ ಚರಿತ್ರೆಯ ಓದಿಗೆ ಸಂಬಂಧಿಸಿದ ಬಗೆಯಾಗಿದೆ ಎಂಬ ವಾದಗಳಿವೆ. ಹೌದು ಹಿಸ್ಟರಿ ಫ್ರಮ್ ಬಿಲೋ ಎಂಬ ತಾತ್ವಿಕ ಚೌಕಟ್ಟನ್ನು ನೆಲೆಯಾಗಿಸಿಕೊಂಡು ಚರಿತ್ರೆಯನ್ನು ಓದುವ ಬಗೆಯೇ ಈ ಸಬಾಲ್ಟರ್ನ್ ಓದು. ಆದರೆ ಚರಿತ್ರೆಯೆಂಬುದು ಸಾಂಸ್ಕೃತಿಕ ವಿದ್ಯಮಾನಗಳಿಂದ ಹೊರತಾದ ಬೆಳವಣಿಗೆಯಲ್ಲ ಎಂಬುದನ್ನೂ ಇಲ್ಲಿ ಗಮನಿಸಬೇಕಾಗುತ್ತದೆ. ಒಂದೊಂದು ಸಮುದಾಯದಲ್ಲಿಯೂ ಆಯಾ ಸಮುದಾಯ ಇಲ್ಲವೇ ಅದನ್ನು ತನ್ನ ಹತೋಟಿಯಲ್ಲಿರಿಸಿಕೊಂಡ ಸಮುದಾಯಗಳ ಈ ಹೊತ್ತಿನ ಬಿಕ್ಕಟ್ಟುಗಳಿಗೆ ಆಯಾ ಸಮುದಾಯದ ಚರಿತ್ರೆಯೇ ಹೊಣೆಯಾಗಿರುತ್ತದೆ. ಹಾಗೂ ಜಾತಿ, ಲಿಂಗ, ಸಂಸ್ಕೃತಿ, ಸಮಾಜ ಹಾಗೂ ಸಾಹಿತ್ಯಿಕ ಬಗೆಗಿನ ನೆಲೆಗಳನ್ನು ರೂಪಿಸುವಲ್ಲಿ ಚರಿತ್ರೆಯ ಪಾತ್ರವೇನು ಹಾಗೂ ಅದರ ಪ್ರಭಾವದ ಸ್ವರೂಪವೇನು ಎಂಬೆಲ್ಲ ನಿಲುವುಗಳು ಚರಿತ್ರೆಯನ್ನು ಕಟ್ಟುವ ಇಲ್ಲವೇ ಕಟ್ಟಿದ ಸ್ವರೂಪದಲ್ಲಿಯೇ ಹೇಗೆಲ್ಲ ಆಟವಾಡಿದೆ ಎಂಬ ಸುಳಿವುಗಳು ಸಿಗುತ್ತವೆ. ಚರಿತ್ರೆಯೆಂಬುದು ಕೇವಲ ಗತದ ವಿವರಗಳನ್ನು ಬಣ್ಣಿಸುವ ಬಗೆ ಮಾತ್ರವಲ್ಲ ಬದಲಾಗಿ ಆಯಾ ಸಮುದಾಯಗಳ ಹಿಂದಿನ, ಇಂದಿನ ಹಾಗೂ ಮುಂದಿನ ಬದುಕಿನ ನಿಲುವುಗಳನ್ನು ನಿರ್ವಹಿಸುವ ಬಗೆಯೂ ಆಗಿರುತ್ತದೆ." [೧೩]

"ಭಾರತದ ಸಂದರ್ಭದಲ್ಲಿ ಅದರಲ್ಲಿಯೂ ಉತ್ತರ ಕರ್ನಾಟಕ ಅಥವಾ ಇನ್ನೂ ಮುಖ್ಯವಾಗಿ ಹೈದರಾಬಾದ್ ಕರ್ನಾಟಕದ ಸಂದರ್ಭದಲ್ಲಿ ರೈತ ಮತ್ತು ರೈತರಿಗೆ ಸಂಬಂಧಿಸಿದ ವಲಯಗಳ ಅಸ್ತಿತ್ವ ಮತ್ತು ಹಿತಾಸಕ್ತಿಗಳನ್ನು ಬೆಂಗಳೂರಿನಂತಹ ಶಕ್ತಿಶಾಲಿ ಅಧಿಕಾರ ಕೇಂದ್ರಗಳು ಮತ್ತು ಅವಕ್ಕೆ ಸಂಬಂಧಿಸಿದ ವಲಯಗಳು ಇತಿಹಾಸದುದ್ದಕ್ಕೂ ಕಡೆಗಣಿಸಿದ್ದನ್ನು ಗಮನಿಸಬಹುದಾಗಿದೆ..ವ್ಯವಸ್ಥೆಗೆ ಸಂಬಂಧಿಸಿದಂತೆ ವಸಾಹತು ಕಾಲದಲ್ಲಿ ಬಹುತೇಕವಾಗಿ ಕಂಡುಬರುವ ಇಂತಹ ಲಕ್ಷಣಗಳು ವಸಾಹತೋತ್ತರ ಕಾಲದ ಚರಿತ್ರೆಯಲ್ಲಿಯೂ ಕಂಡುಬರುವುದು ಆಶ್ಚರ್ಯವೇನಿಲ್ಲ." [೧೪]

ವಸಾಹತೋತ್ತರ ಕಾಲದಲ್ಲಿ 'ಕಟ್ಟಲ್ಪಟ್ಟ' ಚರಿತ್ರೆಗಳೂ ಪ್ರಭು ಪ್ರಧಾನವಾಗಿರುವ ಹಳೆಯ ಕ್ರಮವನ್ನೇ ಮಾದರಿಯಾಗಿಟ್ಟುಕೊಂಡೇ ಬೆಳೆಯುತ್ತಾ ಬಂತು. ಸಬಾಲ್ಟರ್ನ್ ಅಧ್ಯಯನದ ಧೋರಣೆಯಂತೆ 'ತಳದಿಂದ ಇತಿಹಾಸವನ್ನು ನೋಡುವ ಮತ್ತು ಕಟ್ಟುವ' ಪ್ರಕ್ರಿಯೆ ಈ ಸಂದರ್ಭದಲ್ಲಿ ಒಂದು ಕ್ರಾಂತಿಕಾರಿ ಬದಲಾವಣೆಯನ್ನೇ ತಂದೊಡ್ಡಿತು. ಇದರಿಂದಾಗಿ ಪ್ರಾದೇಶಿಕ ಅಧ್ಯಯನಗಳಿಗೆ ಪ್ರೇರಣೆಗಳು ಲಭ್ಯವಾಗಿ, ಮರೆಯಾದ ಜನ ಸಾಮಾನ್ಯರ ಹೋರಾಟ-ತ್ಯಾಗಗಳು ಬೆಳಕಿಗೆ ಬರಲು ಅವಕಾಶವಾಯಿತು. ರಾಜ ಕೇಂದ್ರಿತ ಚರಿತ್ರಾ ಕ್ರಮದಲ್ಲಿ ಈ ವಿಷಯಗಳು ನಿರ್ಲಕ್ಷ್ಯಕ್ಕೆ ಒಳಗಾಗಿದ್ದು ಈ ಬದಲಾವಣೆಯಿಂದಾಗಿ ಸಬಾಲ್ಟರ್ನ್ ಅಲಕ್ಷಿತ ವರ್ಗವನ್ನು ಮುಖ್ಯವಾಹಿನಿಯಲ್ಲಿ ನಿಲ್ಲಿಸಿ, ಅವರ ಮೂಲಕ ಚರಿತ್ರೆ ಸಂರಚಿಸುವ ಹೊಸ ವಿಪ್ಲವಕ್ಕೆ ರಹದಾರಿ ಪ್ರಾಪ್ತವಾಯಿತು.

ಪ್ರಸ್ತುತ ಅಧ್ಯಯನವೂ ಸಬಾಲ್ಟರ್ನ್ ಅಧ್ಯಯನದ ಧೋರಣೆಯಲ್ಲಿ ಕೆಳವರ್ಗದ ಪ್ರತಿಭಟನೆ ಮತ್ತು ಕೊಡಗು-ಕನ್ನಡ ಜಿಲ್ಲೆಗಳ ರೈತ ಬಂಡಾಯ ಕಾಲದ ಚರಿತ್ರೆಯನ್ನು ತಳದಿಂದ ಕಟ್ಟುವ 'ಹಿಸ್ಟರಿ ಪ್ರೋಮ್ ಬಿಲೋ' ಮಾದರಿಯನ್ನು ಲಕ್ಷ್ಯಿಸುತ್ತದೆ. 'ಕಲ್ಯಾಣಸ್ವಾಮಿ' ಎಂಬ ಕಾದಂಬರಿ ಮತ್ತು ಬಂಡಾಯದ ಪ್ರಮುಖ ತಳ ಸಮುದಾಯದ ಪಾತ್ರವನ್ನಿಟ್ಟುಕೊಂಡು ಕೊಡಗು-ಕೆನರಾ ಜಿಲ್ಲೆಗಳ ಸಬಾಲ್ಟರ್ನ್ ಚರಿತ್ರೆಯನ್ನು ಸ್ಥಳೀಯ ಚರಿತ್ರೆಯನ್ನಾಗಿ ರಚಿಸುವ ಪ್ರಯತ್ನವಾಗಿದೆ.

ನಮ್ಮ ಶೈಕ್ಷಣಿಕ ವಲಯದಲ್ಲಿ ಅಧ್ಯಯನ ಮಾಡುವ ಇತಿಹಾಸವೂ ಬರಿಯ ನಾಯಕರ ಚರಿತ್ರೆಯಾಗಿದೆ. ಯುದ್ಧ ಮತ್ತು ಅದರ ವಿಜಯ, ಇವುಗಳೊಂದಿಗೆ ಸಮಗ್ರ ರಾಜ್ಯಾಡಳಿತ ಅರಸನೊಬ್ಬನಿಂದಲೇ ಸಾಧಿತಗೊಂಡ ಒಂದು ಐತಿಹಾಸಿಕ ದಾಖಲೆ ಎಂಬಂತೆ ಬರೆಯಲಾಗಿದೆ. ಹೀಗಾಗಲೂ ಇಲ್ಲಿ ಪ್ರಭುತ್ವ ಕೇಂದ್ರಿತ ಅಲೋಚನೆಗಳಿರುವುದೇ ಕಾರಣ. ರಾಜನಷ್ಟೇ ಪ್ರಬಲವಾಗಿ ಕೆಲವೊಮ್ಮೆ ಅವನಿಗಿಂತಲೂ ಮಿಗಿಲಾಗಿ ರಾಜ್ಯಾಡಳಿತದಲ್ಲಿ ಪಾಲ್ಗೊಂಡು ಜೀವ-ಜೀವನಗಳನ್ನೇ ಪ್ರಭುವಿಗಾಗಿ ಸಮರ್ಪಿಸಿದ ಅಸಂಖ್ಯಾತ ನೈಜ ವೀರರ ಕಥಾನಕಗಳು

ನಿರ್ಲಕ್ಷ್ಯಗೊಳಗಾಗಿವೆ. ಕಾರಣ ಅವರಿಗೆ ಸೂಕ್ತ ಅಧಿಕಾರ ಮತ್ತು ಅವಕಾಶಗಳು ಇಲ್ಲದಿರುವುದು.

ಇತಿಹಾಸವನ್ನು ಪುನರ್‌ಸೃಷ್ಟಿ ಮಾಡಲು ಹೊರಡುವ ಒಬ್ಬ ಕಾದಂಬರಿಕಾರ ಇಲ್ಲವೇ ಯಾವುದೇ ಸೃಜನಶೀಲ ಲೇಖಕ ಕೇವಲ 'ಪ್ರಭು'ಗಳ ಇತಿಹಾಸವನ್ನು ಸೃಷ್ಟಿಸುವುದು ಸಾಮಾನ್ಯವಾಗಿದೆ. ಏಕೆಂದರೆ ಆತನಿಗೆ ಹಿನ್ನೆಲೆ ಮತ್ತು ಆಧಾರವಾಗಿ ಲಭ್ಯ ಐತಿಹಾಸಿಕ ದಾಖಲೆಗಳೆಲ್ಲವೂ 'ಆದದ್ದೆಲ್ಲವೂ ಅವನಿಂದಲೇ' ಎಂಬಂತೆ ಮಾಹಿತಿ ನೀಡುತ್ತಿರುತ್ತದೆ.

"ಇತಿಹಾಸದ ಆಕರಗಳಲ್ಲಿ, ಶಾಸನಗಳು ಈವರೆಗಿನ ಇತಿಹಾಸದ ರಚನೆಯಲ್ಲಿ ನಮಗೆ ಬಹಳ ಮುಖ್ಯವಾಗಿದ್ದವು. ಶಿಲೆಗಳು, ಲೋಹಗಳು, ಮಣ್ಣಿನ ಮಡಿಕೆಗಳು, ಮರದ ರಥಗಳು, ದೇವಾಲಯಗಳ ಬಾಗಿಲುಗಳಂತಹ ಇತರ ಮಾಧ್ಯಮಗಳ ಮೇಲು ಅವು ಬರಹಗಳು, ಕೆತ್ತನೆಗಳಲ್ಲಿ ರಚಿತವಾಗಿ ದಾಖಲಾಗಿವೆ. ಆರಂಭ ಕಾಲದ ಶಾಸನಗಳು ಕೇವಲ ರಾಜರನ್ನು ಸ್ತುತಿಸುವ ಅವರ ಸಾಧನೆಯನ್ನೇ ವೈಭವೀಕರಿಸಿ ಹೇಳುವ ದಾಖಲೆಗಳಾಗಿವೆ. ಆದರೆ ಮಧ್ಯಕಾಲದ ಬಳಿಕ ಸಮಾಜದ ಇತರ ವರ್ಗದವರು ದಾನಾದಿ ಕಾರ್ಯಗಳ ಮೂಲಕ ಮುನ್ನೆಲೆಗೆ ಬಂದು ಅವುಗಳನ್ನು ಶಾಸನಗಳ ರೂಪದಲ್ಲಿ ದಾಖಲಾಗಿಸುವ ಕಾರ್ಯಕ್ಕೆ ತೊಡಗಿದ್ದು ಕಂಡು ಬರುತ್ತದೆ. ಅವುಗಳಲ್ಲಿ ಇಲ್ಲಿಯವರೆಗೆ ಪ್ರಧಾನವಾಗಿದ್ದ ಶಿಷ್ಟ ಭಾಷೆಯು ಗೌಣವಾಗಿ ಸ್ಥಳೀಯ ಆಡುಭಾಷೆಯ ಪದಗಳು ಹೆಚ್ಚು ಹೆಚ್ಚು ಬಳಕೆಯಾದವು. ಆದರೆ ಶಾಸನಗಳೂ ಸೇರಿದಂತೆ ಎಲ್ಲ ಆಕರಗಳು ಒಂದಿಲ್ಲೊಂದು ಮಿತಿಯಿಂದ ಇತಿಹಾಸದ ಸತ್ಯದ ಕೆಲವು ಮುಖಗಳನ್ನಷ್ಟೇ ದಾಖಲಿಸುತ್ತವೆ. ಹೀಗೆ ನಮ್ಮ ನೆಲದ ಬಹುಸಂಖ್ಯಾತ ಸಮೂದಾಯದ ದನಿಯಾಗಿರುವ ಮೌಖಿಕ ಪರಂಪರೆಯನ್ನು ಇತಿಹಾಸವು ಅಲಕ್ಷಿಸಿದೆ. ಆದುದರಿಂದ ಪ್ರಾದೇಶಿಕ ಇತಿಹಾಸವು ಸ್ಥಳೀಯ ಮಾಹಿತಿ ಮೂಲಗಳನ್ನು ಪ್ರಧಾನವೆಂದು ಪರಿಗಣಿಸುತ್ತದೆ. ಸ್ಥಳೀಯ ವಕ್ತೃಗಳಿಗೆ ಮಹತ್ವವನ್ನು ಕೊಡುತ್ತದೆ. ಇದರಿಂದ ಒಂದು ಪ್ರದೇಶದಲ್ಲಿರುವ ಎಲ್ಲ ಸ್ಥಳಗಳಿಗೆ ಸಂಬಂಧಿಸಿದ ಐತಿಹಾಸಿಕ ಸಂಗತಿಗಳು ಅವುಗಳ ಎಲ್ಲ ಸೂಕ್ಷ್ಮ ಸ್ತರಗಳೊಂದಿಗೆ ಲಭ್ಯವಾಗುವ ಸಾಧ್ಯತೆಗಳು ಪ್ರಾದೇಶಿಕ ಅಧ್ಯಯನದಲ್ಲಿ ನಿಚ್ಚಳವಾಗತೊಡಗುತ್ತದೆ." [೧೫]

"ನಮ್ಮ ದೇಶದಲ್ಲಿ ಸಾಮಾಜಿಕ ಇತಿಹಾಸವೇ ಇಲ್ಲ. ಸಾಮಾಜಿಕ ಇತಿಹಾಸ ಬರೆದಿಡುವ ಪದ್ಧತಿ ನಮ್ಮ ಪ್ರಾಚೀನ ಇತಿಹಾಸಕಾರರಲ್ಲಾಗಲೀ, ನಮ್ಮ ಕವಿಗಳಲ್ಲಾಗಲೀ ಕಂಡು ಬಂದದ್ದು ತೀರಾ ಅಪರೂಪ. ಅವರಿಗೆ ಚರಿತ್ರೆ ಎಂದರೆ– ರಾಜ, ಅವನು ಮಾಡಿದ ಯುದ್ಧಗಳು, ಕಟ್ಟಿಸಿದ ಕೆರೆಗಳೂ, ದಾನಧರ್ಮಗಳು, ಮದುವೆಗಳು ಇವು ಮಾತ್ರ ಎಂದು ತೋರುತ್ತದೆ." [೧೬]

“ಬೇರೆ ಬೇರೆ ಪ್ರದೇಶಗಳ ಜನ ಆಯಾ ಕಾಲದಲ್ಲಿ ತಮ್ಮ ಒಟ್ಟು ಬದುಕಿನ ಮೇಲೆ ಪ್ರತ್ಯಕ್ಷ ಹಾಗೂ ಪರೋಕ್ಷ ಪರಿಣಾಮ ಬೀರಿದ ವಿಭಿನ್ನ ವಿದ್ಯಮಾನಗಳತ್ತ ಬೆಳಕು ಚೆಲ್ಲುವ ಅಪೂರ್ವ ಮಾಹಿತಿಯ ಕಣಜಗಳಾಗಿರುತ್ತಾರೆ. ಆದರೆ ಅವೆಲ್ಲವೂ ನಮ್ಮ ಸಿದ್ಧ ಅಧ್ಯಯನ ವಿಧಾನಕ್ಕೆ ಅಪ್ರಸ್ತುತವಾದುದಾಗಿತ್ತು. ನಾವು ಒಪ್ಪಿಕೊಂಡಿರುವ ಬೌದ್ಧಿಕ ವಲಯವು ಮೌಖಿಕ ಆಕರಗಳಿಗೆ ಮಹತ್ವ ನೀಡಲಿಲ್ಲ. ಅದು ಸ್ಥಳೀಯ ವೈಶಿಷ್ಟ್ಯಗಳಿಗೆ, ಸ್ಥಳೀಯ ಜನರಿಗೆ ಸಂಪೂರ್ಣ ಅಪರಿಚಿತವಾಗಿ, ಕೇವಲ ಅಧಿಕಾರ, ಅಂತಸ್ತು, ಸ್ಥಾನಮಾನ, ಪ್ರಚಾರಗಳಂತಹ ಸ್ವಾರ್ಥ ಸಾಧನೆಗಾಗಿ ಸತ್ಯದ ನಿರೂಪಣೆಯಲ್ಲಿ ಮೇಲ್‌ಸ್ತರದ ಮಾಹಿತಿಗಳಿಗೆ ಸೀಮಿತವಾಗಿ ಅಂಗವಿಕಲವಾಗಿ ಬಿಟ್ಟಿತು. ಹೀಗೆ ಬೇರೆ ಬೇರೆ ಕಾಲಘಟ್ಟದ ಬದಲಾವಣೆಗಳಿಗೆ ಪ್ರತಿಕ್ರಿಯಿಸುತ್ತ ಸಾಗಿದ ಸ್ಥಳೀಯವಾದ ಎಲ್ಲ ಚಿಂತನೆಗಳನ್ನು ದಾಖಲಿಸದೆ ಹೋದಾಗ, ಆನಂತರದಲ್ಲಿ ರೂಪುಗೊಳ್ಳುವ ಚರಿತ್ರೆ ಅಸಮಗ್ರವಾಗಿ ಬಿಡುತ್ತದೆ.” [೧೭]

“ 'ಸರ್ವ ಸಮ್ಮತವಾದ ಐತಿಹಾಸಿಕ ಸತ್ಯ' ಇಲ್ಲಿ ಎನ್ನಲೂ ಸಾಧ್ಯವಿಲ್ಲ. ಎಲ್ಲರೂ ಒಪ್ಪಬೇಕಾದ ಐತಿಹಾಸಿಕ ದಾಖಲೆಗಳು ಲಭ್ಯವಿದೆ. ಅವುಗಳನ್ನು ಎಲ್ಲರೂ ಒಪ್ಪಲೇ ಬೇಕಾಗುತ್ತದೆ. ಆದರೆ ಹೀಗೆ ಒಪ್ಪಲು ಕೆಲವು ರಾಜಕೀಯ ಮತೀಯ ಮೊದಲಾದ ಪೂರ್ವಗ್ರಹಿಕೆಗಳು ಅಡ್ಡಿ ಬರುತ್ತವೆ.” [೧೮]

ಈ ಪೂರ್ವಗ್ರಹಿಕೆಗಳನ್ನು ಮೀರಿ ಅಪ್ಪಟ ಸತ್ಯವೊಂದನ್ನು ಶೋಧಿಸಲು ಕೆಲವಾರು ನೆಲೆಯ ಅಧ್ಯಯನಗಳು ಮುಖ್ಯವಾಗುತ್ತದೆ.

“ಮತ ಪ್ರಸಾರದ ಉದ್ದೇಶದಿಂದ ಭಾರತಕ್ಕೆ ಕ್ರೈಸ್ತ ಮಿಶನರಿಗಳ ಆಗಮನ, ಶಾಲೆಗಳ ಆರಂಭ, ಎಲ್ಲರಿಗೂ ತೆರೆದುಕೊಂಡ ಇಂಗ್ಲಿಷ್ ಶಿಕ್ಷಣ, ಬ್ರಿಟಿಷ್ ಆಡಳಿತ ಪದ್ಧತಿಯ ಪರಿಚಯ – ಇವು ದೇಸಿ ವಿದ್ಯಾವಂತ ವರ್ಗವನ್ನು ಸೃಷ್ಟಿಮಾಡಿದವು. ಪಾಶ್ಚಾತ್ಯ ಶಿಕ್ಷಣದ ಲಭ್ಯತೆ, ಪಾಶ್ಚಾತ್ಯ ಸಾಹಿತ್ಯದ ಪರಿಚಯ, ಪಾಶ್ಚಾತ್ಯ ದೇಶಗಳ ಸಂಪರ್ಕ, ಪರದೇಶಗಳಲ್ಲಿ ಕಂಡ ಸಂಪೂರ್ಣ ಅಪರಿಚಿತವಾದ ಬದುಕು ಭಾರತೀಯರನ್ನು ಮೊದಲು ಅಚ್ಚರಿಗೆ ನೂಕಿತು. ಆಗ ಭಾರತೀಯರೆದುರು ತಾವು ಹುಟ್ಟಿ, ಬೆಳೆದ ಪರಂಪರೆಯ ಸಾಂಪ್ರದಾಯಿಕ ಸಂಸ್ಕೃತಿ ಇತ್ತು. ಇದಕ್ಕೆದುರಾಗಿ ಆಗಷ್ಟೇ ಪರಿಚಿತವಾದ, ಅಸದಳವಾದ ಬೆರಗನ್ನು ಉಂಟುಮಾಡಿದ ಪಾಶ್ಚಾತ್ಯ ಸಂಸ್ಕೃತಿಯೂ ಇತ್ತು. ಇವುಗಳಲ್ಲಿ ಯಾವುದನ್ನು, ಎಷ್ಟು ಪ್ರಮಾಣದಲ್ಲಿ ಆಯ್ಕೆ ಮಾಡಿಕೊಳ್ಳಬೇಕೆಂಬುದು ತಿಳಿಯದೆ ಭಾರತೀಯರ ದೊಡ್ಡ ಗುಂಪು ಗೊಂದಲಕ್ಕೊಳಗಾಯಿತು. ಇಂತಹ ಸನ್ನಿವೇಶದಲ್ಲಿ ತಮ್ಮ ಮೇಲಾಗುತ್ತಿದ್ದ ವಿದೇಶಿ ಸಂಸ್ಕೃತಿಯ ಅತಿಯಾದ ಪ್ರಭಾವಕ್ಕೆ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಬೇಕಾದ ಅಗತ್ಯ ಅವರಿಗೆ ಕಂಡುಬಂದಿತು. ಇದಕ್ಕಾಗಿ ಅವರು ತಮ್ಮದೇ ಆದ ಸಾಂಸ್ಕೃತಿಕ ವ್ಯಕ್ತಿತ್ವವನ್ನು ನಿರ್ಮಿಸಿಕೊಳ್ಳಬೇಕಾಯಿತು. ಹೀಗೆ ತಂತಮ್ಮ ಸಾಮಾಜಿಕ ಅಸ್ಮಿತೆಗಾಗಿ

ಬೇರೆ ಬೇರೆ ಪ್ರದೇಶಗಳಲ್ಲಿ ನಡೆದ ದೇಸಿ ವಿದ್ಯಾವಂತರ ಹೋರಾಟವೇ ಪ್ರಾದೇಶಿಕತೆಯನ್ನು ಅನಾವರಣ ಮಾಡುವ ತುರ್ತನ್ನು ಪ್ರಕಟಿಸಿತು." ೧೯

ಈ ಬಗೆಗಿನ ಆಲೋಚನೆಯಿಂದಾಗಿ ಸ್ಥಳೀಯ ಚರಿತ್ರೆಯ ಉಗಮಕ್ಕೆ ಮುಖ್ಯ ಪ್ರೇರಣೆ ದೊರೆಯಿತು. ಇತಿಹಾಸದ ನಿಲುವುಗಳನ್ನು ಈ ಸ್ಥಳೀಯ ಚರಿತ್ರೆಯ ಅಧ್ಯಯನವು ಒಳಗೊಂಡಿರುತ್ತದೆ.

"ಈ ಅಧ್ಯಯನಗಳು ಆಧುನಿಕ ಇತಿಹಾಸಕಾರರ ಹೊಸ ಹುಡುಕಾಟಗಳ, ವಿಶಿಷ್ಟ ಇತಿಹಾಸ ಪ್ರಜ್ಞೆಗೆ ಸಾಕ್ಷಿಯಾಗಿವೆ: 'ಇತಿಹಾಸ'ದ ಗರ್ಭದಲ್ಲಿ ಹುದುಗಿಹೋಗಿರುವ ಸತ್ಯಗಳನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನಗಳಾಗಿವೆ. ಮಾನವ ಜನಾಂಗದ ಸಮಗ್ರ ಅಧ್ಯಯನಕ್ಕೆ ಇದೇ ಅಂತಿಮ ಹಾಗೂ ಅನಿವಾರ್ಯ ಪ್ರತಿಕ್ರಿಯೆ ಎಂಬುದು ದೃಢಪಡುತ್ತದೆ. ವ್ಯಷ್ಟಿಯ ಶೋಧಕ್ಕೆ, ಪರಿಗಣನೆಗೆ ವಿಶ್ಲೇಷಣೆಗೆ ಅಗತ್ಯ ವೇದಿಕೆ ಕಲ್ಪಿಸಿಕೊಡುವುದು ಸ್ಥಳೀಯ ಅಧ್ಯಯನದ ಉದ್ದೇಶ. ಮನುಷ್ಯನ ಮೂಲಸ್ಥಿತಿ, ಸ್ವರೂಪ, ಸ್ವಭಾವ, ವಿಚಾರ, ಆಸೆ-ಆಕಾಂಕ್ಷೆ, ಇತಿ-ಮಿತಿ ಇತ್ಯಾದಿಯನ್ನು ನಿಖರವಾಗಿ ಬಿಂಬಿಸುವ ಪ್ರಯತ್ನ ಇದರದು. ಎಲ್ಲವನ್ನೂ ಒಳಗೊಳ್ಳುವಂಥದ್ದಾದ್ದರಿಂದ, ಇದು ಜಗತ್ತಿನ ಎಲ್ಲವುಗಳ ಅಸ್ತಿತ್ವದ ನೆಲೆಗಳನ್ನು ಸೂಕ್ಷ್ಮವಾಗಿ ನಿರ್ಧರಿಸಿ ಕೊಡ ಬಯಸುತ್ತದೆ." ೨೦

ಸ್ಥೂಲವಾಗಿ ೧೮೨೩ ರಲ್ಲಿ ಕೆಂಪುನಾರಾಯಣನು ಬರೆದಿರುವ 'ಮುದ್ರಾ ಮಂಜೂಷ' ಐತಿಹಾಸಿಕ ಕಾದಂಬರಿಯನ್ನು ಹೋಲುವ ಕನ್ನಡದ ಮೊದಲ ಕೃತಿ. ಆ ನಂತರದಲ್ಲಿ ಈ ಪ್ರಕಾರದಲ್ಲಿ ಸಾಕಷ್ಟು ಕೃಷಿ ನಡೆದಿವೆ, ನಡೆಯುತ್ತಲೂ ಇವೆ. ಇವುಗಳಲ್ಲಿ ಬೆಟಗೇರಿ ಕೃಷ್ಣಶರ್ಮ, ದೇವುಡು, ಕೊರಟಿ ಶ್ರೀನಿವಾಸರಾಯರು, ಮಾಸ್ತಿ, ಕೆ.ವಿ.ಅಯ್ಯರ್, ಬಿ.ಪುಟ್ಟಸ್ವಾಮಯ್ಯ, ಗಳಗನಾಥ, ಬಿ.ವೆಂಕಟಾಚಾರ್ಯ, ವೀರಕೇಸರಿ ಸೀತಾರಾಮ ಶಾಸ್ತ್ರಿ, ತ.ರಾ.ಸು ಮುಂತಾದ ಪ್ರಮುಖರ ಐತಿಹಾಸಿಕ ಕಾದಂಬರಿಗಳೆಲ್ಲವೂ ಮತ್ತೆ ಒಬ್ಬನೇ ನಾಯಕನ 'ಏಕ ವ್ಯಕ್ತಿ ಸಾಧನೆ'ಗಳೆಂಬಂತೆ ಚರಿತ್ರೆಯನ್ನು ಪುನರ್‍ರಚಿಸುತ್ತವೆ. ಇಲ್ಲೂ ಪ್ರಭುತ್ವ ಕೇಂದ್ರಿತ ಧೋರಣೆಯನ್ನೇ ಕಾಣಬಹುದು. ಗತ ಘಟನೆಯೊಂದನ್ನು ಸುಲಭವಾಗಿ ಕಟ್ಟಿಕೊಡುವ ಸಾಂಪ್ರದಾಯಿಕ ವಿಧಾನಗಳಿವು.

ಇಂತಹ ಆರ್ಷೇಯ 'ಸಂಪ್ರದಾಯ'ವನ್ನು ಭೇದಿಸಿ, ಎಷ್ಟೋ ಪ್ರಭುತ್ವದ ದಿಗ್ವಿಜಯಕ್ಕೆ ನೈಜ ಕಾರಣರಾದ ನಿಷ್ಠಾವಂತ ಅಧೀನವೀರರ ಮಹಿಮಾ ಕಥಾನಕಗಳನ್ನು ಕಟ್ಟಿಕೊಡುವ ಸಾಹಿತ್ಯ ಕೃತಿಗಳು ಪ್ರಾಮಾಣಿಕ ಪ್ರಯತ್ನವೆಂದೆನಿಸಿದರೂ ಪ್ರಕಟವಾದದ್ದು ತೀರಾ ವಿರಳ.

ಅಂಥದ್ದೊಂದು ಅಪೂರ್ವ ಕಾದಂಬರಿ ನಿರಂಜನರ 'ಕಲ್ಯಾಣಸ್ವಾಮಿ'. ನಿರಂಜನರೇ ಹೇಳುವ ಹಾಗೆ. "ಇದು ನೂರಿಪ್ಪತ್ತು ವರ್ಷಗಳಿಗೆ ಹಿಂದಿನ ಕಥೆ. ಕನ್ನಡ ಭೂಭಾಗವಾದ ಕೊಡಗು-ಕನ್ನಡ ಜಿಲ್ಲೆಗಳಿಗೆ ಸಂಬಂಧಿಸಿದುದು. ಭಾರತದ ಮೇಲೆ ಅಂಧಕಾರ ಕವಿಯ ತೊಡಗಿದ್ದ ಮುಸ್ಸಂಜೆಯ ಹೊತ್ತಿನಲ್ಲಿ ನಡೆದ ಘಟನೆ. ಪ್ರಾದೇಶಿಕ ಕಥೆಯಾದರೂ ರಾಷ್ಟ್ರೀಯ ವ್ಯಾಪ್ತಿಯುಳ್ಳದ್ದು." [೨೧]

"ರಾಜರಿಗೆ ಸಂಬಂಧಿಸಿದುದು ಮಾತ್ರ ಇತಿಹಾಸವೆಂದು ಭಾವಿಸಿದವರು ಬರೆದುದಲ್ಲಿ ಕಲ್ಯಾಣಪ್ಪನ ವಿಷಯವಾಗಿ ದೊರೆಯುವುದು ಎರಡು ಮೂರು ಸಾಲು ಮಾತ್ರ. ಯಾಕೆಂದರೆ ಕಲ್ಯಾಣ ಸ್ವಾಮಿ ರಾಜ ವಂಶಸ್ಥನಲ್ಲ." [೨೨]

"ಕಲ್ಯಾಣಸ್ವಾಮಿಯು ಕೊಡಗು ಸೈನ್ಯದಲ್ಲಿ ದಳಪತಿಯಾಗಿದ್ದನೆಂಬುದೇ, ವೀರರಾಜನ ಆಪ್ತಕೋಟಿಯಲ್ಲೊಬ್ಬನಾಗಿದ್ದನೆಂಬುದೇ ನನ್ನ ಅಭಿಪ್ರಾಯ ಕೂಡ. ಆತನನ್ನು ಸೇರಿದವರೂ ಪ್ರಮುಖರು. ಅರಸು ವೀರರಾಜನಿಗೆ ಬೇಟೆಯಲ್ಲಿ ಶಿಕ್ಷಕನಾಗಿದ್ದ, ಹಾರುವ ಹಕ್ಕಿಯ ಕಣ್ಣಿಗೆ ಗುರಿ ಹೊಡೆಯಲು ಸಮರ್ಥನಾಗಿದ್ದ ಚೆಟ್ಟಿ ಕುಡಿಯನೂ ಆತನ ತಮ್ಮನೂ ಕಲ್ಯಾಣಸ್ವಾಮಿಯ ಜತೆಗಿದ್ದರು. ಕೊಡಗಿನ ಶರಣಾಗತಿಗೆ ಕಾರಣನಾಗಿದ್ದ ಬೋಪು ದಿವಾನನ ಸಂಬಂಧಿಕರೇ ಕಲ್ಯಾಣ ಸ್ವಾಮಿಯನ್ನು ಕೂಡಿಕೊಂಡರು. ಪ್ರಖ್ಯಾತ ಸರದಾರನಾದ ಹುಲಿಕೊಂದ ನಂಜಯ್ಯ, ವಿವಿಧ ನಾಡುಗಳ ಸುಭೇದಾರರು, ಮಾಜಿ ಉದ್ಯೋಗಸ್ಥರೆಷ್ಟೋ ಜನ ಆತನನ್ನು ಹಿಂಬಾಲಿಸಿದರು. ಕಲ್ಯಾಣ ಸ್ವಾಮಿಯದು ಕಳ್ಳಕಾರರ ತಂಡವಾಗಿರಲಿಲ್ಲ ಎನ್ನುವುದಕ್ಕೆ ಇಷ್ಟು ಸಾಕು." [೨೩] - ಇದು ನಿರಂಜನರೇ ತಮ್ಮ ಕಾದಂಬರಿ ನಾಯಕನಾದ ಕಲ್ಯಾಣ ಸ್ವಾಮಿಯ ಕುರಿತಾಗಿ ನೀಡುವ ಪರಿಚಯ.

ಕೊಡಗಿನ ಸಾಂಸ್ಕೃತಿಕ ಇತಿಹಾಸದಲ್ಲಿಯೇ ಕಲ್ಯಾಣಸ್ವಾಮಿ ಎನ್ನುವ ನಿಷ್ಠಾವಂತ ಅಪ್ರತಿಮ ವೀರನ ಸಿದ್ಧಿ-ಸಾಧನೆಗಳು ನಿರ್ಲಕ್ಷ್ಯಕ್ಕೆ ಒಳಗಾಗಿರುವಾಗ ಸಾಹಿತ್ಯ ರಂಗದಲ್ಲಿ ಇದು ಆರ್ಜಿಸಿರುವ ಪ್ರಸಿದ್ಧಿ-ಪ್ರಾಚುರ್ಯ ಅಷ್ಟಕಷ್ಟೆ.

"ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕರ್ನಾಟಕದ ಉದ್ದಗಲಕ್ಕೆ ನಡೆದ ವಸಾಹತು ವಿರೋಧಿ ದಂಗೆಗಳಲ್ಲಿ ೧೮೩೭ರ ಅಮರ ಸುಳ್ಯ ರೈತ ಬಂಡಾಯ ತೀರಾ ಭಿನ್ನವಾದುದು ಮತ್ತು ಪ್ರತ್ಯೇಕ ಅಧ್ಯಯನಕ್ಕೆ ಅರ್ಹವಾದುದು" [೨೪]

"ಇದು ನಾಯಕರುಗಳೇ ಇಲ್ಲದೆ ನಡೆದ ದಂಗೆ, ಜಂಗಮವೇಷಧಾರಿಗಳು ತಾವು ಕೊಡಗಿನ ರಾಜ ಸಂಬಂಧಿಗಳೆಂದು ಹೇಳಿಕೊಂಡು ಜನರನ್ನು ಒಗ್ಗೂಡಿಸಿ ಬ್ರಿಟಿಷರ ವಿರುದ್ಧ ದಂಗೆ ನಡೆಸಿದ್ದು ಐತಿಹಾಸಿಕ ಮತ್ತು ಅಪೂರ್ವ" [೨೫]

"ರಾಜವಂಶೀಯ ನಾಯಕರುಗಳಿಲ್ಲದೆ ಕೇವಲ ರೈತರ ನಾಯಕತ್ವದಲ್ಲಿ ನಡೆದ ಈ ಬಂಡಾಯ ಬ್ರಿಟಿಷರನ್ನು ಎರಡು ವಾರಗಳ ಪರ್ಯಂತ ದಕ್ಷಿಣ ಕನ್ನಡದಿಂದ ಹೊರಗಿಡುವುದರಲ್ಲಿ ಯಶಸ್ವಿಯಾಯಿತು. ಬಂಡಾಯ ಆರಂಭವಾದದ್ದು ಈಗಿನ ಸುಳ್ಯ ತಾಲೂಕಿನ ಬೆಳ್ಳಾರೆಯಲ್ಲಿ, ಬಂಡಾಯದ ಪರಿಣಾಮದ ದೃಷ್ಟಿಯಿಂದ ಇದನ್ನು ಕೊಡಗು–ಕೆನರಾ ಬಂಡಾಯವೆಂದು ಸ್ವತಃ ಬ್ರಿಟಿಷರೇ ಕರೆದದ್ದಲ್ಲದೆ ಅದರ ಕಾರಣಗಳನ್ನು ಶೋಧಿಸಿ ದೂರಗಾಮಿ ಪರಿಣಾಮಗಳನ್ನು ಅಂದಾಜಿಸಲು ಎರಡು ಸಮಿತಿಗಳನ್ನು ಕೂಡಾ ರಚಿಸಿದರು." [೨೬]

ಲೆವಿನ್ ಮತ್ತು ಕಬ್ಬನ್ ಸಮಿತಿಗಳೆಂಬುದು ಇವಕ್ಕಿದ್ದ ಹೆಸರುಗಳು.

"೧೮೩೭ರ ಈ ಬಂಡಾಯಕ್ಕೆ ಯಾರಾದರೊಬ್ಬ ಬಲಾಢ್ಯ ರಾಜನ ನಾಯಕತ್ವ ಲಭಿಸುತ್ತಿದ್ದರೆ ಇದು ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಪರಿಗಣಿತವಾಗುವ ಎಲ್ಲಾ ಸಾಧ್ಯತೆಗಳಿದ್ದವು. ಕೊಡಗನ್ನು ಬ್ರಿಟಿಷರು ವಶಪಡಿಸಿಕೊಳ್ಳದಿರುತ್ತಿದ್ದರೆ ಅಥವಾ ಕೊಡಗಿನಿಂದ ಅಮರ ಸುಳ್ಯ ಮಾಗಣೆಯನ್ನು ವಿಭಜಿಸಿ ಒಡೆದು ಆಳುವ ನೀತಿಯನ್ನು ಅನುಷ್ಠಾನಗೊಳಿಸದಿರುತ್ತಿದ್ದರೆ, ಶೋಷಣಾತ್ಮಕ ಕಂದಾಯ ನೀತಿ ಅಮರ ಸುಳ್ಯ ಮಾಗಣೆಯಲ್ಲಿ ಜಾರಿಗೆ ಬಾರದಿರುತ್ತಿದ್ದರೆ ಈ ಬಂಡಾಯ ಸಂಭವಿಸುವ ಸಾಧ್ಯತೆ ಇರಲಿಲ್ಲ." [೨೭]

ರಾಜನೊಬ್ಬನ ನಾಯಕತ್ವ ಇರಲಿಲ್ಲ ಎಂಬ ಕಾರಣಕ್ಕೆ ಈ ಬಂಡಾಯ ನಿರ್ಲಕ್ಷ್ಯಕ್ಕೊಳಗಾದದ್ದಲ್ಲದೆ, ನಕಾರಾತ್ಮಕವಾಗಿ ಚಿತ್ರಿತವಾಯಿತು.

**'ಕಲ್ಯಾಣಸ್ವಾಮಿ' ಕುರಿತಾದ ಈವರೆಗಿನ ಸಾಹಿತ್ಯ ಸಮೀಕ್ಷೆ:**

ನಿರಂಜನರ ಕಾದಂಬರಿ 'ಕಲ್ಯಾಣಸ್ವಾಮಿ' ಮತ್ತು ಆತನ ಹೋರಾಟ ಕಾಲದ ಸ್ಥಳೀಯ ಚರಿತ್ರೆಯ ಕುರಿತಾಗಿ ಈ ವರೆಗೆ ನಡೆದಿರುವ ಅಧ್ಯಯನಗಳು ಕಡಿಮೆ ಎನ್ನುವುದು ಲಭ್ಯ ಸಾಹಿತ್ಯ ಸಮೀಕ್ಷೆಯಿಂದ ವ್ಯಕ್ತವಾಗುತ್ತದೆ. ನಡೆದಿರುವ ಬಹುತೇಕ ಅಧ್ಯಯನಗಳಲ್ಲಿ ಕೆಲವು ಕಲ್ಯಾಣಸ್ವಾಮಿಯ ಕೊಡಗಿನ ಹೋರಾಟಗಳನ್ನು ವಿಶ್ಲೇಷಿಸಿದರೆ, ಇನ್ನು ಕೆಲವು ಆತ ಕನ್ನಡ ಜಿಲ್ಲೆಗಳಲ್ಲಿ ಮಾಡಿದ ಕ್ರಾಂತಿಗಳ ಬಗೆಗೆ ವಿವೇಚಿಸುತ್ತದೆ.

ಕೊಡಗಿನಲ್ಲಿ ನಡೆದ ಅಧ್ಯಯನಗಳು ಕೊಂಚ ಮಟ್ಟಿಗೆ ಕಲ್ಯಾಣಪ್ಪನ ಸಾಧನೆಗಳನ್ನು ವೈಭವೀಕರಿಸಿದರೆ, ದಕ್ಷಿಣ ಕನ್ನಡ (ಈಗಿನ ಕಾಸರಗೋಡು ಜಿಲ್ಲೆಯೂ ಸೇರಿದಂತೆ) ಜಿಲ್ಲೆಯಲ್ಲಿ ಈ ಬಂಡಾಯದ ಬಗ್ಗೆ ನಡೆದ ಶೇಕಡಾ ೯೦ ಅಧ್ಯಯನಗಳೆಲ್ಲವೂ ನಕಾರಾತ್ಮಕ ಧೋರಣೆಯಿಂದ ವಿವೇಚಿಸಿದೆ. ಇದು ಈ

ಪ್ರದೇಶದಲ್ಲಿ ನಡೆದ ಅಧ್ಯಯನದ ಮೇಲೆ ಬ್ರಿಟಿಷ್ ಪ್ರಭಾವವಿರುವುದರ ಗುರುತೆನ್ನಬಹುದು.

ಇದಲ್ಲದೆ, "೧೮೪೧ನೆಯ ಇಸವಿಯಲ್ಲಿ ಹುಟ್ಟಿದ ಮಂಗಳೂರಿನ ಬಾಸೆಲ್ ಮಿಶ್ಯನ್ ಛಾಪಖಾನೆಯಲ್ಲಿ 'ಕಲ್ಯಾಣಪ್ಪನ ಪ್ರಸಂಗ' ಎಂದು ಒಂದು ಯಕ್ಷಗಾನ ಪ್ರಸಂಗವು ಅಚ್ಚಾಗಿತ್ತು. ಅದನ್ನು ಕೂಡಲೇ ಇಂಗ್ಲಿಷ್ ಸರಕಾರವು ಕಂಡು ಹಿಡಿದು ಅದರ ಪ್ರತಿಗಳನ್ನೆಲ್ಲ ಸುಟ್ಟು ಹಾಕಿಸಿತಂತೆ." [೨೮] ಸದ್ಯ ಲಭ್ಯವಿಲ್ಲದಿದ್ದರೂ, ಕಲ್ಯಾಣಪ್ಪನ ಕುರಿತಾದ ಮೊದಲ ದಾಖಲೆ ಇದುವೆನ್ನಬಹುದು. ಆ ನಂತರದಲ್ಲಿ ತುಳುನಾಡಿನ ಇತಿಹಾಸಕಾರರಲ್ಲಿ ಪ್ರಥಮರೆನಿಸಿಕೊಂಡಿರುವ ಪೊಳಲಿ ಶೀನಪ್ಪ ಹೆಗ್ಗಡೆಯವರ 'ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಆಳಿಯಕಟ್ಟು' ಕೃತಿಯಿಂದ ಮೊದಲ್ಗೊಂಡು, ಆ ಬಳಿಕ ತುಳುನಾಡಿನ ಚರಿತ್ರೆಗೆ ಸಂಬಂಧಿಸಿದಂತೆ ಪೊಳಲಿ ಹೆಗ್ಗಡೆ ಮತ್ತು ಎನ್.ಎಸ್.ಕಿಲ್ಲೆ ಸೇರಿ ರಚಿಸಿದ 'ಪ್ರಾಚೀನ ತುಳುನಾಡು', ಗಣಪತಿ ರಾವ್ ಐಗಳರ 'ದಕ್ಷಿಣ ಕನ್ನಡ ಜಿಲ್ಲೆ ಪ್ರಾಚೀನ ಇತಿಹಾಸ', ಕ್ರಿ.ಶ. ೧೯೨೭ ರಿಂದ ೧೯೪೫ರ ಅವಧಿಯಲ್ಲಿ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳು ಬರೆದ ೨೧ ಲೇಖನಗಳಲ್ಲಿ 'ತುಳುನಾಡು-ಪೂರ್ವಸ್ಮೃತಿ', ಭಾಸ್ಕರ ಆನಂದ ಸಾಲೆತ್ತೂರ್ (೧೯೦೨-೬೨)ರವರ 'ಹಿಸ್ಟರಿ ಆಫ್ ತುಳುವ', ಕೇಶವ ಕೃಷ್ಣ ಕುಡ್ವ (೧೮೯೨-೧೯೪೯) ಅವರ 'ದಕ್ಷಿಣ ಕನ್ನಡದ ಇತಿಹಾಸವು' ಮುಂತಾದ ಉದ್ಗ್ರಂಥಗಳು ಅವಿಭಜಿತ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಇತಿಹಾಸವನ್ನು ಆಳವಾಗಿ ಅಧ್ಯಯನಕ್ಕೆ ಒಳಪಡಿಸುವುದರೊಂದಿಗೆ ಈ ಅಧ್ಯಯನದ ಸ್ಥಳೀಯ ಚರಿತ್ರೆಯ ಸೌಧಕ್ಕೆ ಭದ್ರವಾದ ಪಂಚಾಂಗವನ್ನು ನಿರ್ಮಿಸಿದೆನ್ನಬಹುದು.

ಆದರೆ, ಪ್ರಸ್ತುತ ಕಾದಂಬರಿಯ ಕಥೆ ಮತ್ತು ಕಲ್ಯಾಣಸ್ವಾಮಿಯ ಕ್ರಾಂತಿ ಹೋರಾಟಗಳ ವಸ್ತುವನ್ನು ಆಧರಿಸಿ ಬಂದ ಮೊತ್ತಮೊದಲ ಕೃತಿ ಆಲೆಟ್ಟಿ ರಾಮಣ್ಣ ಶಗ್ರಿತ್ತಾಯರ 'ಕಲ್ಯಾಣಪ್ಪನ ಕಾಟಕಾಯಿ' ಎಂಬ ಯಕ್ಷಗಾನ ಪ್ರಸಂಗ. ಇದರಲ್ಲಿ ರೈತರು ಬ್ರಿಟಿಷರ ವಿರುದ್ಧ ಬಂಡಾಯವೆದ್ದು ಮೊದಲು ಗೆಲುವು ಸಾಧಿಸಿ, ನಂತರ ಸೋತ ಕಥೆಯಿದೆ. ಈ ಕೃತಿಗೆ ಕಲ್ಯಾಣಪ್ಪನ ಕುರಿತಾಗಿ ಸ್ಥಳೀಯವಾಗಿದ್ದ ಐತಿಹ್ಯಗಳೇ ಪ್ರಧಾನ ಆಕರ ಎಂಬುದಾಗಿ ಶಗ್ರಿತ್ತಾಯರೇ ತಿಳಿಸುತ್ತಾರೆ. ಇಲ್ಲಿ ರೈತರ ದಂಡು ಲೂಟಿ, ದಂದೆ, ಅನಾಚಾರ, ಮಾನಹರಣ ಮುಂತಾದ ಅನೈತಿಕ ಚಟುವಟಿಕೆಗಳಲ್ಲಿ ತೊಡಗಿತ್ತೆಂದು ಚಿತ್ರಿಸಲಾಗಿದೆಯಾದರೂ, ಶಗ್ರಿತ್ತಾಯರ ಈ ಆರೋಪಗಳಿಗೆ ಖಚಿತವಾದ ಆಧಾರಗಳಿಲ್ಲ. ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ ಸ್ಥಳೀಯ ರೈತರನ್ನು 'ಕೊತ್ತಳಿಂಗೆ ಭಂಟರು' ಎಂದು ಶಗ್ರಿತ್ತಾಯರು ಕರೆದಿದ್ದಾರೆ. ಇದು ಬ್ರಿಟಿಷ್ ವಿರಚಿತ ಇತಿಹಾಸವನ್ನೇ ಶಗ್ರಿತ್ತಾಯರು ನಂಬಿ, ಪ್ರಸಂಗ ರಚನೆಗೆ ತೊಡಗಿರುವುದಕ್ಕೆ ಸಾಕ್ಷಿ. ಆದರೂ ಕೊಡಗು-ಕೆನರಾ ರೈತ ಬಂಡಾಯದ ಕುರಿತಾಗಿ

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಆರಂಭಿಕ ಜಾಗೃತಿ ಮೂಡಿಸಿದ ಕೃತಿ ಇದುವೇ ಆಗಿದೆ ಎನ್ನುವುದು ಇಲ್ಲಿ ಮುಖ್ಯವಷ್ಟೆ. [೨೯]

ಡಿ.ಎನ್.ಕೃಷ್ಣಯ್ಯನವರ 'ಕೊಡಗಿನ ಇತಿಹಾಸ' (೧೯೭೪) ಎಂಬ ಕೃತಿಯು ಕೊಡಗಿನ ಚರಿತ್ರೆಯ ಮೊದಲ ಅಧೀಕೃತ ದಾಖಲೆ ಎಂಬುದಾಗಿ ಗುರುತಿಸಲ್ಪಟ್ಟಿದ್ದು, ರೈತ ಬಂಡಾಯದ ಬಗೆಗೆ ಕಿರು ಲಕ್ಷ್ಯವನ್ನಷ್ಟೇ ನೀಡಿದೆ ಎನ್ನಬಹುದು. [೩೦]

ಪ್ರಸ್ತುತ ಅಧ್ಯಯನಕ್ಕೆ ಲಭಿಸುವ ಪಿ.ಎಚ್.ಡಿ. ಪ್ರಬಂಧಗಳ ಪೈಕಿ ಪುರುಷೋತ್ತಮ ಬಿಳಿಮಲೆಯವರ ಸುಳ್ಯ ಪರಿಸರದ ಗೌಡ ಜನಾಂಗ, ಒಂದು ಸಾಂಸ್ಕೃತಿಕ ಅಧ್ಯಯನ (೧೯೮೫) ಎಂಬ ನಿಬಂಧದಲ್ಲಿ ರೈತ ಬಂಡಾಯದ ಮುಂಚೂಣಿ ನಾಯಕರುಗಳಾಗಿದ್ದವರು ಕೊಡಗಿನ ರಾಜಮನೆತನದವರೊಡನೆ ಸಂಬಂಧ ಹೊಂದಿದ್ದ ಸುಳ್ಯದ ಗೌಡ ಜನಾಂಗಕ್ಕೆ ಸೇರಿದ ರೈತರುಗಳು, ೧೮೩೪ರಲ್ಲಿ ಕೊಡಗಿನ ರಾಜನನ್ನು ಪದಚ್ಯುತಿಗೊಳಿಸಿ ಅಮರ ಸುಳ್ಯ ಸೀಮೆಯನ್ನು ಕೊಡಗಿನಿಂದ ಬೇರ್ಪಡಿಸಿ ದಕ್ಷಿಣ ಕನ್ನಡಕ್ಕೆ ಸೇರಿಸಿದ್ದು ಕಲ್ಯಾಣಪ್ಪನ ಬಂಡಾಯಕ್ಕೆ ಪ್ರಮುಖ ಕಾರಣವೆಂಬ ವಿಚಾರವನ್ನು ಬಿಳಿಮಲೆಯವರು ತಿಳಿಸುತ್ತಾರೆ. [೩೧]

ಡಾ. ಶಾಮಭಟ್ಟರ ನಿಬಂಧದಲ್ಲಿ, ಟಿಪ್ಪು ಮಡಿದ ಬಳಿಕ ವಸಾಹತು ಶಾಹಿಯ ಆಡಳಿತಕ್ಕೆ ಒಳಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಅರ್ರವತ್ತು ವರ್ಷಗಳಲ್ಲಿ ಬ್ರಿಟಿಷರಿಗೆ ತೋರಿದ ಪ್ರತಿರೋಧ, ಅದನ್ನು ಅಡಗಿಸಲು ಬ್ರಿಟಿಷರು ಬಳಸಿದ ಬೇರೆ ಬೇರೆ ತಂತ್ರೋಪಾಯಗಳು, ಆಡಳಿತ ಮತ್ತು ಕಂದಾಯ ವ್ಯವಸ್ಥೆಗಳ ಬಗೆಗೆ ವಿಫುಲ ಮಾಹಿತಿಯನ್ನು ಒದಗಿಸುತ್ತದೆ.

ಡಾ. ಪ್ರತಿಮಾ ಪಿ.ಎಸ್.ರವರು ತಮ್ಮ 'ವಸಾಹತು ಶಾಹಿ ಮತ್ತು ದೇಶೀಯ ಆರ್ಥಿಕತೆಗಳ ಮುಖಾಮುಖಿ: ಕೊಡಗು–ಕೆನರಾ ಆರ್ಥಿಕ ಬಂಡಾಯ' (೨೦೧೧)ಎಂಬ ನಿಬಂಧವು ಈ ಅಧ್ಯಯನಕ್ಕೆ ಪ್ರಮುಖ ಆಕರವಾಗುವಷ್ಟು ಹೇರಳ ಮಾಹಿತಿ ಹೊಂದಿದೆ. ಇಲ್ಲಿ ರೈತರ ಆರ್ಥಿಕ ಬಂಡಾಯದ ವಿಶ್ಲೇಷಣೆಯೊಂದಿಗೆ ಕಲ್ಯಾಣಪ್ಪನ ಮತ್ತು ಅವನ ಜೊತೆಗಾರರ ಪ್ರಮುಖ ಕ್ರಾಂತಿಯ ವಿವೇಚನೆ ಮತ್ತು ವಿಶದೀಕರಣ ಲಭಿಸುವುದರಿಂದ ಈ ಅಧ್ಯಯನದ ದೃಷ್ಟಿಯಿಂದ ಇದು ಅತ್ಯಂತ ಮಹತ್ವವನ್ನು ಪಡೆದುಕೊಳ್ಳುತ್ತದೆ. [೩೨]

ಎನ್.ಎಸ್. ದೇವಿಪ್ರಸಾದ್‌ರವರ 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ(೧೯೫೫) ಕೃತಿಯು ರೈತ ಬಂಡಾಯದ ಹಿನ್ನೆಲೆ ಮತ್ತು ಮುನ್ನೆಲೆಗಳನ್ನು ಕೆಲವು ದಾಖಲೆಗಳ ಆಧಾರದಲ್ಲಿ ಪರಿಚಯಿಸಿ ಕೊಡುವುದರೊಂದಿಗೆ ಲೆವಿನ್, ಕಬ್ಬನ್ ಮತ್ತು ರಿಕ್ಟರ್ ವರದಿಗಳನ್ನು ಹಾಗೂ ಬಂಡುಕೋರ ರೈತರ ವಿಚಾರಣೆಯ ನ್ಯಾಯಾಂಗ ಸೂಚಿ (Judicial Index) ಆಧಾರವಾಗಿರಿಸಿಕೊಂಡು ಈ ಕೃತಿಯ

ಪ್ರಬಂಧಗಳಿವೆ.[೩೩] ಈ ಕೃತಿಯ ಮುಂದುವರಿಕೆಯಂತಿರುವ ದೇಪಿಪ್ರಸಾದ್ ಸಂಪಾಜೆಯವರ ಸಂಪಾದಕತ್ವದ 'ಕೊಡಗಿನಲ್ಲಿ ಭಾಷಾ ಸಾಂಸ್ಕೃತಿಕ ಸಾಮರಸ್ಯ (೧೯೯೯) ಕೃತಿಯಲ್ಲೂ ಅಮರ ಸುಳ್ಯ ಕ್ರಾಂತಿ ಜಾಥಾದ ಪಿವರಣೆ, ವಿಚಾರ ಸಂಕಿರಣದ ವಿಮರ್ಶೆ, ವರದಿಗಳ ಪ್ರಸ್ತಾಪವಿದ್ದು, ಕಲ್ಯಾಣಸ್ವಾಮಿಯ ಕುರಿತ ಅಧ್ಯಯನದ ಅವಶ್ಯಕತೆಯನ್ನು ಇವು ಎಚ್ಚರಿಸುತ್ತವೆ.[೩೪]

ಇವಲ್ಲದೆ, ಎಂ.ಜಿ. ನಾಗರಾಜರ 'ಹಾಲೇರಿ ರಾಜವಂಶವು'(೨೦೦೪), ಸಾಕಿಯವರ 'ಮೇಕಿಂಗ್ ಹಿಸ್ಟರಿ – ಕರ್ನಾಟಕಾಸ್ ಪೀಪಲ್ ಆ್ಯಂಡ್ ದೆಯರ್ ಪಾಸ್ಟ್ ' (೨೦೦೪) ತಂಬಂಡ ವಿಜಯ ಪೂಣಚ್ಚರ 'ಪಳಮೆ' (೨೦೦೪), 'ಕೊಡಗು ವಿವರಣೆ' (೨೦೦೫), ಮುಂತಾದ ಕೃತಿಗಳು ಕಲ್ಯಾಣಸ್ವಾಮಿ ನಾಯಕತ್ವದ ರೈತ ದಂಗೆಯ ಕುರಿತಾಗಿ ಬಹುನೆಲೆಯಲ್ಲಿ ಚರ್ಚಿಸುತ್ತದೆ.

ಈ ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿಯ ಆಧಾರದಲ್ಲಿ ಬೂನಳ್ಳಿ ಜವರೇಗೌಡರು ಅದೇ ಹೆಸರಿನ, ಡಾ. ಪ್ರಭಾಕರ್ ಶಿಶಿಲರ 'ಅಮರ ಕ್ರಾಂತಿ ವೀರರು', ವಿದ್ಯಾಧರ ಬಡ್ಡಡ್ಕರ 'ಕೆದಂಬಂಡಿ ರಾಮಗೌಡ' ಈ ಮೂರುನಾಟಕಗಳು ಕಲ್ಯಾಣಸ್ವಾಮಿ ಮತ್ತು ಆತನ ಹೋರಾಟಗಳ ಚಿತ್ರಣವನ್ನು ತೆರೆದಿರಿಸಿ, ರಂಗಾಭಿನಯದ ಮುಖೇನ ಕ್ರಾಂತಿಗೆ ಪ್ರಚಾರ ಮಹತ್ವಗಳನ್ನೂ ತಂದುಕೊಟ್ಟಿದೆ.

ನಿರಂಜನರ 'ಸ್ವಾಮಿ ಅಪರಂಪಾರ', (೧೯೭೭), ಶ್ರೀನಿವಾಸರ 'ಚಿಕ್ಕವೀರ ರಾಜೇಂದ್ರ' (೧೯೮೪), ಪ್ರಭಾಕರ್ ನೀರ್‌ಮಾರ್ಗರ 'ಮಂಗಳೂರ ಕ್ರಾಂತಿ' (೨೦೦೬), ಡಾ. ಪ್ರಭಾಕರ್ ಶಿಶಿಲರ 'ನದಿ ಎರಡರ ನಡುವೆ' (೨೦೦೯) ಮತ್ತು ಶಿಶಿಲರದ್ದೇ 'ಮೂಡಣದ ಕೆಂಪು ಕಿರಣ' (೨೦೧೦), ಈ ಐದು ಕಾದಂಬರಿಗಳು ಪ್ರಸ್ತುತ 'ಕಲ್ಯಾಣಸ್ವಾಮಿ' ಕಾದಂಬರಿಯ ಕಥೆಗೆ ಹೆಚ್ಚು ಮಾಹಿತಿದಾಯಕಗಳಾಗಿದ್ದು, ಅಧ್ಯಯನಕ್ಕೆ ಬೆಂಬಲವಾಗಿ ನಿಲ್ಲುತ್ತದೆ. ಶಿಶಿಲರ 'ಕೊಡಗಿನ ಐತಿಹ್ಯ ಕತೆಗಳು' (೨೦೧೦) ಕಥಾ ಸಂಕಲನ ಐತಿಹ್ಯ ಆಧಾರದಲ್ಲಿ ಇತಿಹಾಸವನ್ನು ಪುನಾರಚಿಸಲು ನೆರವಾಗುತ್ತದೆ.

ಪ್ರಸ್ತುತ ಅಧ್ಯಯನವು ಕಲ್ಯಾಣಸ್ವಾಮಿಯ ಹೋರಾಟಗಳ ಕುರಿತಾಗಿ ರಚನೆಗೊಂಡ ಮುಖ್ಯ ಸೃಜನಶೀಲ ಕೃತಿ ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿ ಹಾಗೂ ಮೌಖಿಕ ಮತ್ತು ಲಿಖಿತ ದಾಖಲೆಗಳು ಕಟ್ಟಿಕೊಡುವ ಸ್ಥಳೀಯ ಚರಿತ್ರೆಗಳ ನಡುವೆ ಒಂದು ಅನುಸಂಧಾನವನ್ನು ಕೈಗೊಳ್ಳುವ ಉದ್ದೇಶವನ್ನು ಹೊಂದಿದೆ. ಸೃಜನಶೀಲ ರಚನೆಯಾಗಿ ನಿರಂಜನರ ಕಾದಂಬರಿಯನ್ನು ಮತ್ತು ಕಲ್ಯಾಣಸ್ವಾಮಿಯ ಸ್ಥಳೀಯ ಚರಿತ್ರೆಯನ್ನು ಪ್ರತ್ಯೇಕ–ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಡಿಸುವುದರೊಂದಿಗೆ, ಎರಡು ಆಕರಗಳೂ ರೂಪುಗೊಳಿಸುವ

‘ಕಲ್ಯಾಣಸ್ವಾಮಿ’ಯ ಚರಿತ್ರೆಯ ಸ್ಥೂಲ ಸ್ವರೂಪವನ್ನು ಸಂಶೋಧಿಸುವ ಗುರಿಯೂ ಇದಕ್ಕಿದೆ. ಆ ಮೂಲಕ, ಪ್ರಭುತ್ವದ ಪ್ರಭಾವದಿಂದ ಮರೆಯಾದ ಅಧೀನ ವೀರನೊಬ್ಬನ ಮತ್ತು ಅಂತಹ ಸಮೂದಾಯದ ಅಸ್ಥಿತ್ವದ ಹುಡುಕಾಟ ಇಲ್ಲಿ ಮುಖ್ಯವಾಗುತ್ತದೆ.

ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳನ್ನು ವಸಾಹತುಶಕ್ತಿಯು ತನ್ನದಾಗಿಸಿಕೊಂಡುದರ ಕಾರಣ ಮತ್ತು ಅದಕ್ಕೆ ಜನರು ತೋರಿದ ಪ್ರತಿರೋಧದ ದಾಖಲಾತಿಯನ್ನು ಈ ಅಧ್ಯಯನವು ತನ್ನ ವ್ಯಾಪ್ತಿಗೆ ತೆಗೆದುಕೊಳ್ಳುತ್ತದೆ. ವಸಾಹತು ಶಾಹಿ ಶಕ್ತಿಗೆದುರಾಗಿ ೧೮೩೭ರಲ್ಲಿ ಕಲ್ಯಾಣಸ್ವಾಮಿಯ ಬಳಗ ಬಂಡೆದ್ದುದಕ್ಕೆ ಕಾರಣ ಮತ್ತು ಅದರ ಪರಿಣಾಮಗಳನ್ನು ವಿಶ್ಲೇಷಿಸಲಾಗುತ್ತದೆ.

ನಿರಂಜನರ ‘ಕಲ್ಯಾಣಸ್ವಾಮಿ’ ಕಾದಂಬರಿಯನ್ನು ಕೇಂದ್ರವಾಗಿಟ್ಟುಕೊಂಡು ಆ ವಸ್ತು–ವಿಷಯಗಳ ಪರಿಧಿಯಲ್ಲಿ ಒಳಗಾಗುವ ಇತರ ತತ್ಸಂಬಂಧಿತ ಸೃಜನ ಶೀಲ ಕೃತಿಗಳೂ, ಅಧೀಕೃತ ಚರಿತ್ರೆ ಎಂದು ಕರೆಯಲಾಗುವ ‘ಸರಕಾರಿ ಗಜೆಟರ್ಸ್’ ಇವುಗಳ ಜೊತೆಗೆ ಮೌಖಿಕ ದಾಖಲೆಗಳು – ಇವಿಷ್ಟರೊಂದಿಗೆ ಸ್ಥಳೀಯ ಚರಿತ್ರೆಯನ್ನು ಮುಖಾಮುಖಿಗೊಳಿಸಿ ಕಲ್ಯಾಣಸ್ವಾಮಿ ಕೇಂದ್ರಿತ ಹೊಸ ಸ್ಥಳೀಯ ಚರಿತ್ರೆಯನ್ನು ಸೃಷ್ಟಿಗೊಳಿಸಲಾಗುತ್ತದೆ.

ಹೀಗಾದಾಗ, ಇದೊಂದು ವ್ಯಕ್ತಿಕೇಂದ್ರಿತ, ಪ್ರಧಾನೇತರ ಪಾತ್ರ ಕೇಂದ್ರಿತ, ಐತಿಹಾಸಿಕ, ಪ್ರಾದೇಶಿಕ, ಜನಪದೀಯ, ಸಾಹಿತ್ಯಿಕ ಅಧ್ಯಯನವಾಗಿ ಬಹುನೆಲೆಯಲ್ಲಿ ಗುರುತಿಸಿಕೊಳ್ಳಬಹುದು.

## ಅಧ್ಯಯನದ ವಿಧಾನ:

೧೮೩೭ರ ಕಲ್ಯಾಣ ಸ್ವಾಮಿಯ ದಂಗೆ ಅಥವಾ ರೈತ ಹೋರಾಟವನ್ನು ಕುರಿತಾಗಿ ವಸ್ತುನಿಷ್ಠ ಅಧ್ಯಯನಗಳು ನಡೆದಿರುವುದು ತೀರಾ ಕಡಿಮೆ. ಇದನ್ನು ಭಾವನಾತ್ಮಕವಾಗಿ ಸ್ವಾತಂತ್ರ್ಯ ಸಮರವೆಂದೂ, ಹೀಯಾಳಿಸುವ ದಾಟಿಯಲ್ಲಿ ‘ಕಾಟಕಾಯಿ’ ಎಂದೂ ಕರೆದದ್ದಿದೆ. ಈ ಘಟನೆಯನ್ನೇ ಮೂಲವಾಗಿಟ್ಟುಕೊಂಡು ‘ನಿರಂಜನರ ಕಲ್ಯಾಣಸ್ವಾಮಿ’ ಕಾದಂಬರಿ ಜೀವ ಪಡೆದಿದೆ. ಘಟನೆ ಮತ್ತು ಕಾದಂಬರಿಯ ಕಥನಗಳಿಗೆ ಸಂಬಂಧಿಸಿದಂತೆ ಬಾಶ್ಯಲ್ ಮಿಶನ್‌ನ ಪತ್ರಾಗಾರವನ್ನು, ವಿವಿಧ ಶೈಕ್ಷಣಿಕ ಮತ್ತು ಸಂಶೋಧನಾ ಸಂಸ್ಥೆಗಳ ಗ್ರಂಥಾಲಯಗಳನ್ನು ಹಾಗೂ ಅಂತರ್ಜಾಲವನ್ನು ಬಳಸಿಕೊಳ್ಳಲಾಗಿದೆ. ವಿಷಯ ತಜ್ಞರನ್ನು ಭೇಟಿ ಮಾಡಿ ಮತ್ತು ವಿಚಾರ ಸಂಕಿರಣಗಳಲ್ಲಿ ಪಾಲ್ಗೊಂಡು ಈ ಘಟನೆ ಮತ್ತು ಕೃತಿಗೆ ಸಂಬಂಧಿಸಿದ ವಿವಿಧ ವಿಮರ್ಶಾ ಆಯಾಮಗಳ ಮಾಹಿತಿಗಳನ್ನು ಕ್ರೋಢೀಕರಿಸಲಾಗಿದೆ.

ಹಾಗೆಯೇ, ಐತಿಹಾಸಿಕ ಘಟನಾ ಕೇಂದ್ರಿತ ಅಧ್ಯಯನವೂ ಇದಾಗಿರುವ ಕಾರಣ ಸ್ಥಳೀಯ ಚರಿತ್ರೆ ಬಲ್ಲವರಿಂದ ಮಾಹಿತಿ ಸಂಗ್ರಹಿಸಿ, ವಿಶ್ಲೇಷಿಸಲಾಗಿದೆ. ಮಡಿಕೇರಿಯ ಶ್ರೀ ಓಂಕಾರೇಶ್ವರ ದೇವಸ್ಥಾನ, ಅರಮನೆ, ರಾಜಸೀಟ್, ಸಂಪಾಜೆಯ ಕೆಲವು ಮನೆಗಳು, ದೇಗುಲಗಳು, ಸುಳ್ಯದ ಶ್ರೀ ಚೆನ್ನಕೇಶವ ದೇವಸ್ಥಾನ, ಜಿಕರ್ನಕಟ್ಟೆ ಪರಿಸರ, ಬಾವುಟಗುಡ್ಡೆಯ ಟಾಗೋರ್ ಪಾರ್ಕ್, ಬಾಶ್ಮಲ್ ಮಿಶನ್ ಸಮುಚ್ಚಯ, ಬೆಳ್ಳಾರೆಯ ಪರಿಸರ, ಮುಂತಾದ ಪ್ರಮುಖ ಪ್ರದೇಶಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂದರ್ಶಿಸಿ ತಾಜಾ ಮಾಹಿತಿ ಸಂಗ್ರಹ ಮಾಡಲಾಗಿದೆ.

**ಟಿಪ್ಪಣಿಗಳು :-**

೧) ಬರಗೂರು ರಾಮಚಂದ್ರಪ್ಪ (ಪ್ರ.ಸಂ) 'ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ' ಡಾ. ಆರ್. ಶೇಷಶಾಸ್ತ್ರಿ (ಲೇ.) ೧೯೯೩, ಪುಟ : ೧೮

೨) ರಾಜಶೇಖರಪ್ಪ. ಬಿ. 'ಇತಿಹಾಸ ಕಥನ' ೨೦೦೧, ಪುಟ ೨.

೩) ನಾಯಕ.ಹಾ.ಮಾ. (ಸಂ) 'ಚಿನ್ನದ ಗರಿ', ಕನ್ನಡ ಕಾದಂಬರಿಗಳಲ್ಲಿ ಇತಿಹಾಸ : ಕೊರಟ್ಟಿ ಶ್ರೀನಿವಾಸ ರಾವ್ (ಲೇ) ಪುಟ :೧೧೫-೧೧೬.

೪) ಶೈಲಾ ಯು. ಪ್ರಾದೇಶಿಕತೆಯೂ ಕಲ್ಲು ಹೇಳುವ ಕಥೆಗಳು, ಶ್ರೀ ಬೆನಕ, ಸುದರ್ಶನ ನಗರ, ಫಜೀರು, ಮಂಗಳಗಂಗೋತ್ರಿ, ೨೦೧೨, ಪುಟ ೨.

೫) ರಾಜಾರಾಮ ಹೆಗಡೆ, 'ಇತಿಹಾಸದ ಅಧ್ಯಯನ ಏಕೆ ಮತ್ತು ಹೇಗೆ?' ಹೊಸತು, ವಿಶೇಷ ಸಂಚಿಕೆ, ಜನವರಿ ೨೦೦೪, ಪುಟ : ೨೦೧

೬) ಅಜಕ್ಕಳ ಗಿರೀಶ್ ಭಟ್, ಬುದ್ಧಿಜೀವಿ ವರ್ಸಸ್ ಬೌದ್ಧಿಕ ಸ್ವಾತಂತ್ರ್ಯ, ಚಿಂತನ ಬಯಲು, ಮೊಡಂಕಾಪು, ಬಂಟ್ವಾಳ, ಪುಟ ೨೭.

೭) ರಾಜಾರಾಮ ಹೆಗಡೆ, ಪುಟ ೧೯೨

೮) ನಿರಂಜನ, 'ಕಲ್ಯಾಣಸ್ವಾಮಿ' ಕಾದಂಬರಿ ೨೦೦೫(ಪ.ಮು) 'ಇತಿಹಾಸ ಮತ್ತು ಸೃಷ್ಟಿ ಸಾಹಿತ್ಯ' (ಲೇ) ಪುಟ : ೧೮೭

೯) ವಿಜಯ್ ಪೂಣಚ್ಚ, ತಂಬಂಡ, ಕೆಳವರ್ಗದ ಪ್ರತಿಭಟನೆ – ಸಬಾಲ್ಟರ್ನ್ ಚರಿತ್ರೆ, ಪ್ರಸಾರಾಂಗ, ಹಂಪಿ ಕನ್ನಡ ವಿಶ್ವವಿದ್ಯಾನಿಲಯ, ೨೦೦೯, ಪುಟ ೩೯-೪೦

೧೦) ಮೇಟಿ ಮಲ್ಲಿಕಾರ್ಜುನ (ಸಂ.) ಅರುಹು ಕುರುಹು ಪತ್ರಿಕೆ, 'ಮೌನ', ೨೯೯, ನವಿಲು ರಸ್ತೆ, ಕುವೆಂಪು ನಗರ, ಮೈಸೂರು, ಜನವರಿ ಮಾರ್ಚ್ ಸಂಚಿಕೆ ೨೦೧೩ ಪುಟ ೭

೧೧) ಅದೇ, ಪುಟ ೬

೧೨) ವಿಜಯ್ ಪೂಣಚ್ಚ ತಂಬಂಡ, ಕೆಳವರ್ಗದ ಪ್ರತಿಭಟನೆ : ಸಬಾಲ್ಟರ್ನ್ ಚರಿತ್ರೆ, ಪುಟ : ೪

೧೩) ಮೇಟಿ ಮಲ್ಲಿಕಾರ್ಜುನ, ಅರುಹು-ಕುರುಹು, ಪುಟ ೬

೧೪) ಪಿಜಯ್ ಪೂಣಚ್ಚ ತಂಬಂಡ, ಕೆಳವರ್ಗದ ಪ್ರತಿಭಟನೆ : ಸಬಾಲ್ಟರ್ನ್ ಚರಿತ್ರೆ, ಪುಟ : ೮೨

೧೫) ಕೃಷ್ಣರಾಯ.ಶಾ.ಮಂ. (ಪ್ರ.ಸಂ) ತರಾಸು ಬದುಕು–ಬರಹ ದುರ್ಗಾಸ್ತಮಾನ, ಶಿವರಾಮ ಕಾಡನಕುಪ್ಪೆ (ಲೇ) ಪುಟ ೮೦೨.

೧೬) ಶೈಲಾ ಯು. ಪ್ರಾದೇಶಿಕತೆಯೂ ಕಲ್ಲು ಹೇಳುವ ಕಥೆಗಳು ಶ್ರೀ ಬೆನಕ, ಸುಂದರ್ಶನ ನಗರ, ಫಜೀರು, ಮಂಗಳಗಂಗೋತ್ರಿ, ೨೦೧೨, ಪುಟ ೮.

೧೭) ಅದೇ, ಪುಟ ೭

೧೮) ಭೈರಪ್ಪ.ಎಸ್.ಎಲ್, ವಿಜಯ ಕರ್ನಾಟಕ, ಸಂದರ್ಶನದಲ್ಲಿ (೨೮–೦೧–೨೦೦೩)

೧೯) ಶೈಲಾ, ಪುಟ ೫

೨೦) ಶೈಲಾ, ಪುಟ ೪

೨೧) ನಿರಂಜನ, ಕಲ್ಯಾಣ ಸ್ವಾಮಿ ೨೦೦೫, ಪುಟ ೧೯೦

೨೨) ಅದೇ, ಪುಟ ೧೯೧

೨೩) ಅದೇ, ಪುಟ ೧೯೧

೨೪) ಪ್ರತಿಮಾ ಪಿ.ಎಸ್. ವಸಾಹತುಶಾಹಿ ಮತ್ತು ದೇಶೀಯ ಆರ್ಥಿಕತೆಗಳ ಮುಖಾಮುಖಿ : ಕೊಡಗು–ಕೆನರಾ ಆರ್ಥಿಕ ಬಂಡಾಯ, ಪಿ.ಹೆಚ್.ಡಿ. ಪ್ರಬಂಧ, ಹಂಪಿ ಕನ್ನಡ ವಿ.ವಿ. ೨೦೧೧, ಪಟ : ೬

೨೫) ಅದೇ, ಪುಟ : ೨೭

೨೬) ಅದೇ, ಪುಟ : ೬

೨೭) ಅದೇ, ಪುಟ : ೬–೭

೨೮) ನಿರಂಜನರಿಗೆ ಎಂ.ಗೋವಿಂದ ಪೈಗಳು ಬರೆದ ಪತ್ರ, ಕಲ್ಯಾಣ ಸ್ವಾಮಿ, ೨೦೦೫, ಪುಟ ೧೯೨

೨೯) ಆಲೆಟ್ಟಿ ರಾಮಣ್ಣ ಶಗ್ರಿತ್ತಾಯ, 'ಕಲ್ಯಾಣಪ್ಪನ ಕಾಟಕಾಯಿ' ಯಕ್ಷಗಾನ ಪ್ರಸಂಗವು, ರಾಷ್ಟ್ರಬಂಧು ಪ್ರೆಸ್, ಮಂಗಳೂರು, ೧೯೫೬.

೩೦) ಕೃಷ್ಣಯ್ಯ.ಡಿ.ಎನ್, 'ಕೊಡಗಿನ ಇತಿಹಾಸ', ಪ್ರಸಾರಾಂಗ, ಮೈಸೂರು ವಿ.ವಿ. ೧೯೭೪

೩೧) ಪುರುಷೋತ್ತಮ ಬಿಳಿಮಲೆ, ಸುಳ್ಯ ಪರಿಸರದ ಗೌಡ ಜನಾಂಗ, ಒಂದು ಸಾಂಸ್ಕೃತಿಕ ಅಧ್ಯಯನ, ಮಂಗಳೂರು ವಿ.ವಿ. ೧೯೮೫

೩೨) ಪ್ರತಿಮಾ ಪಿ.ಎಸ್, ವಸಾಹತು ಶಾಹಿ ಮತ್ತು ದೇಶೀಯ ಆರ್ಥಿಕ ಕತೆಗಳ ಮುಖಾಮುಖಿ ಕೊಡಗು–ಕೆನರಾ ಆರ್ಥಿಕ ಬಂಡಾಯ, ೨೦೧೧

೩೩) ದೇವಿಪ್ರಸಾದ್.ಎನ್.ಎಸ್, ಅಮರ ಸುಳ್ಯದ ಸ್ವಾತಂತ್ರ್ಯ ಸಮರ

೩೪) ದೇವಿಪ್ರಸಾದ್.ಎನ್.ಎಸ್,ಸಂಪಾಜೆ (ಸಂ), ಕೊಡಗಿನಲ್ಲಿ ಭಾಷಾ ಸಾಂಸ್ಕೃತಿಕ ಸಾಮರಸ್ಯ, ಅಮರ ಕ್ರಾಂತಿ ಉತ್ಸವ ಸಮಿತಿ, ಸುಳ್ಯ, ದ.ಕ., ೨೦೦೩.

# ಅಧ್ಯಾಯ – ೨

## ಇತಿಹಾಸ ಮತ್ತು ಸಾಹಿತ್ಯಕ್ಕಿರುವ ಸಂಬಂಧದ ಸಾಧ್ಯತೆಗಳು

ಸಾಹಿತ್ಯ ಕೃತಿಯೊಂದನ್ನು ಅದು ಒಳಗೊಳ್ಳುವ ಚಾರಿತ್ರಿಕ ಸನ್ನಿವೇಶದ ನೆಲೆಯಿಂದ ವಿಶ್ಲೇಷಿಸುವ ಉದ್ದೇಶವನ್ನು ಈ ಪ್ರಬಂಧ ಇಟ್ಟುಕೊಂಡಿರುವ ಕಾರಣ ಇತಿಹಾಸ ಅಥವಾ ಚರಿತ್ರೆ ಮತ್ತು ಸಾಹಿತ್ಯ ಕೃತಿಗಳ ನಡುವಣ ಸಂಬಂಧದ ಬೇರೆ ಬೇರೆ ನೆಲೆಗಳನ್ನು ಕಂಡುಕೊಳ್ಳುವುದು ಇಲ್ಲಿ ಅವಶ್ಯವಾಗಿದೆ.

ಒಬ್ಬ ವ್ಯಕ್ತಿಯು ಜೀವಿತಾವಧಿಯ 'ಗತ'ವನ್ನು ಅವಲೋಕಿಸುವ ಪ್ರಕ್ರಿಯೆಯೇ ಇತಿಹಾಸವೆನ್ನಬಹುದು. ಅದು ವ್ಯಕ್ತಿ ಜೀವನದಿಂದ ಆತನ ಕಾಲದ ಬಗೆಗಿನ ಅವಲೋಕನವಾಗಿರುತ್ತದೆ. ಇಲ್ಲಿ ವ್ಯಕ್ತಿಗಿಂತಲೂ ಕಾಲ ಮುಖ್ಯ. ಆದರೆ ಆ ಕಾಲವನ್ನು ವ್ಯಕ್ತಿ ಮತ್ತು ಅವನ ಜೀವನ ವೃತ್ತಾಂತವೇ ರಚಿಸಿಕೊಡಬೇಕಾಗುತ್ತದೆ. ಹಾಗಾಗಿ ಕಾಲವನ್ನು ಒಂದು ಸಾಮುದಾಯಿಕ ನೆಲೆಯಲ್ಲಿ ಕಟ್ಟಿಕೊಡುವುದು ಇತಿಹಾಸಕ್ಕೆ ಮುಖ್ಯವಾಗುತ್ತದೆ.

ಚರಿತ್ರೆ ಎಂದರೆ 'ಆಧಾರ'. ಅದು ಹಲವು 'ನಿನ್ನೆ'ಗಳನ್ನು 'ಇಂದಿ'ಗೆ ಪರಿಚಯಿಸುವ ಮೂಲಾಧಾರವಾಗಿದೆ. ಅಲ್ಲದೆ ಇತಿಹಾಸವೆಂಬುದು ನಿಶ್ಚಿತವಾದ ಗತವಲ್ಲ. ಅದೊಂದು ನಿರಂತರ ಪ್ರಕ್ರಿಯೆ.

ಇಂದು ಎಂಬುದು ನಾಳೆಗೆ ಇತಿಹಾಸವಾಗುತ್ತದೆ. ಹಾಗೆಯೇ ಹಲವು 'ನಿನ್ನೆ'ಗಳು 'ಇಂದಿ'ಗೆ ಇತಿಹಾಸವಾಗಿದೆ. ಆದ್ದರಿಂದಲೇ 'ಭೂತ'ವನ್ನು ವರ್ತಮಾನದಲ್ಲಿ ನಿಂತು ಪರಿಕಲ್ಪಿಸುವ ಒಂದು ನೆಲೆಯೇ ಇತಿಹಾಸವೆನ್ನಬಹುದು. ಅದು ಸಂಭವಿತ 'ಗತ'ವನ್ನು ವಾಸ್ತವತೆಯ ನೆಲೆಯಲ್ಲಿ ಪುನರ್ ದರ್ಶಿಸುವ ಪ್ರಯತ್ನ ಮಾಡುತ್ತದೆ.

ಇತಿಹಾಸ ಕೇವಲ ಕಟ್ಟುಕತೆಯಲ್ಲ. ಅದು ಮಾನವ ಸಂಸ್ಕೃತಿಯು ನಡೆದು ಬಂದ ಪಥದ ಹಿನ್ನೋಟ. 'ಹಿಸ್ಟರಿ' ಎಂಬುದು ಇತಿಹಾಸಕ್ಕಿರುವ ಆಂಗ್ಲ ಪದ. ಇದು ಗ್ರೀಕ್ ಭಾಷೆಯ 'ಹಿಸ್ಟೇರಿಯಾ'ದಿಂದ ಬಂದಿದೆ. 'ವಿಚಾರಣೆ' ಎಂಬುದು ಇದರ ಅರ್ಥ. ಸತ್ಯಾನ್ವೇಷಣೆಯೇ ಇದರ ಪ್ರಮುಖ ಗುರಿ.

'ಹಿಸ್ಟರಿ' ಎಂಬುವುದಕ್ಕೆ ಇತಿಹಾಸದಂತೆಯೇ 'ಚರಿತ್ರೆ' ಎಂಬುದೂ ರೂಢಿಯಲ್ಲಿರುವ ಪದ. 'ಚರಿತ್ರೆ' ಎಂದರೆ ಗತಕಾಲದ ಅನುಭವ ವೃತ್ತಾಂತ. ಅದು ನಡೆದಿರುವುದರ ನಿರೂಪಣೆಯ ಕಥನ.

'ಇತಿಹಾಸ ಪಿತಾಮಹ' ಎಂಬ ಹಿರಿಮೆಗೆ ಪಾತ್ರನಾದ ಹೆರೊಡೆಟಸ್ ಹೇಳುವಂತೆ, "ಮುಂದಿನ ಪೀಳಿಗೆಯು ನೆನೆಪಿಡಬೇಕಾದ ಮಹಾವೀರನ ಅಥವಾ ಮಹತ್ವಪೂರ್ಣ ಘಟನೆಗಳ ದಾಖಲೆಯೇ ಇತಿಹಾಸ." [೧]

ಇಲ್ಲಿ ವ್ಯಕ್ತಿ ಮತ್ತು ಘಟನೆಗಳ ಮೂಲಕ ಕಾಲದ ದಾಖಲಾತಿ ಇತಿಹಾಸವಾಗುತ್ತದೆ.

ಅರ್ನಾಲ್ಡ್ ಟಾಯ್ನಬಿಯ ಪ್ರಕಾರ 'ಇತಿಹಾಸವೆಂದರೆ ಬೇರೆ ದೇಶಗಳ ಇತಿಹಾಸವಲ್ಲ. ವ್ಯಕ್ತಿಗಳ ಜೀವನ ಚರಿತ್ರೆಯಲ್ಲ. ಅದು ನಾಗರೀಕತೆಗಳ ಏಳುಬೀಳಿನ ಕಥೆ." [೨]

ಆಂಗ್ಲ ಇತಿಹಾಸ ತಜ್ಞ ಫ್ರೀಮನ್ ಪ್ರಕಾರ–"ಭೂತಕಾಲದ ರಾಜಕೀಯವೇ ವರ್ತಮಾನ ಕಾಲದ ಇತಿಹಾಸ: ಇಂದಿನ ರಾಜಕೀಯವೇ ಭವಿಷ್ಯತ್ತಿನ ಇತಿಹಾಸ" [೩]

ಇವರೆಲ್ಲರ ಪ್ರಕಾರ ಇತಿಹಾಸವೆಂದರೆ ಮನುಷ್ಯನಿಗೆ ಸಂಬಂಧಿತ ವಾಸ್ತವ ಪ್ರಪಂಚದಲ್ಲಿ ನಡೆಯುವುದರ ಚಿಂತನೆ. ಅಂದರೆ ಸುತ್ತಲ ಸಮಾಜದಲ್ಲಿ ಗತಿಸಿದ ವರ್ತಮಾನವನ್ನು ವಾಸ್ತವ ವರ್ತಮಾನದ ರಾಜಕೀಯ ನೆಲೆಯಲ್ಲಿ ಕಂಡುಕೊಳ್ಳುವುದಾಗಿದೆ. ಭೂತ ಜಗತ್ತಿನೊಂದಿಗೆ ವರ್ತಮಾನವೂ, ವರ್ತಮಾನದೊಂದಿಗೆ ಭವಿಷ್ಯವೂ ಇಟ್ಟುಕೊಂಡಿರುವ ಅಭೇದ್ಯ ಬೆಸುಗೆಯ ಒಂದು ಸಾಧ್ಯತೆ. ಸಮಾಜದಲ್ಲಿ ಅವನ ಭೌತಿಕ ಹಾಗೂ ಮಾನಸಿಕ ಪಾತ್ರ, ಲೌಕಿಕ ಅಂಶಗಳ ದೃಷ್ಟಿಯಿಂದ ಪರಸ್ಪರ ಸಂಬಂಧಗಳನ್ನು ಕುರಿತು ಯೋಚಿಸುವುದಾಗಿದೆ. ಅದೊಂದು ನಿರಂತರ ಪ್ರಕ್ರಿಯೆ. ಇತಿಹಾಸದ ವ್ಯಾಪ್ತಿ ಇಷ್ಟಕ್ಕೇ ಸೀಮಿತವಾಗಿರದೆ, ಇದನ್ನು ಮೀರಿ ಮಾನವನ ಬದುಕಿನ ಭಿನ್ನ ನೆಲೆಗಳನ್ನು ಒಳಗೊಂಡಿದೆ. ಮಾನವ ಬದುಕಿನ ಮತ್ತು ಸಾಮಾಜಿಕ ವ್ಯವಸ್ಥೆಯ ಚಾರಿತ್ರಿಕ, ಆರ್ಥಿಕ, ಧಾರ್ಮಿಕ, ಕಲಾತ್ಮಕ ಜೀವನದ ವಿಧಾನಗಳೆಲ್ಲವನ್ನೂ ಒಳಗೊಂಡಿದೆ.

ಕ್ರೋಚೆಯ ಅಭಿಪ್ರಾಯದಂತೆ, "ಚೈತನ್ಯದ ಮೂರ್ತೀಕರಣವೇ ಇತಿಹಾಸ. ಆ ಚೈತನ್ಯವು ಕಲೆ, ತರ್ಕ, ದಿನನಿತ್ಯ ಜೀವನದ ವ್ಯಾಪಾರ ಹಾಗೂ ನೀತಿ ತತ್ವಗಳ ರೂಪದಲ್ಲಿ ವ್ಯಕ್ತವಾಗುತ್ತದೆ. ಮಾನವನ ಪ್ರಗತಿಗೆ ಕಾರಣವಾಗುವ ಈ ನಾಲ್ಕು ಮೂಲಭೂತ ಶಕ್ತಿಗಳು ಚರಿತ್ರೆಗೆ ಅವಶ್ಯಕವಾಗಿದೆ." [೪]

ಕ್ರೋಚೆಯ ಈ ಹೇಳಿಕೆಗೆ ಪೂರಕವಾಗಿ ಭಾರತೀಯ ಇತಿಹಾಸ ತಜ್ಞರಾದ ರಾಧಾಕಮಲ ಮುಖರ್ಜಿಯವರು ಹೇಳುವಂತೆ, ಇತಿಹಾಸವೆಂದರೆ ನಾಗರಿಕತೆಯ ಚರಿತ್ರೆ ಇದಾಗಿದೆ. ಅಂದರೆ ಕಲೆ ಮತ್ತು ಸಂಸ್ಕೃತಿ ದರ್ಶನ ಹಾಗೂ ಅರ್ಥ ವ್ಯವಸ್ಥೆಯ ಚರಿತ್ರೆಯಾಗಿದೆ. [೫]

ದಕ್ಷಿಣ ಭಾರತದ ಪ್ರಮುಖ ಇತಿಹಾಸಕಾರರಾಗಿದ್ದ ನೀಲಕಂಠಶಾಸ್ತ್ರಿಯವರು ಅಭಿಪ್ರಾಯಿಸುವಂತೆ, "ಇತಿಹಾಸವು ಅತ್ಯಂತ ವ್ಯಾಪಕವಾದುದು. ಅದು ಮಾನವ ಕುಲ ಜೀವನದ ಪ್ರತಿಮುಖವನ್ನು ಒಳಗೊಳ್ಳುತ್ತದೆ. ಅದು ಕೇವಲ ದೊರೆಗಳ, ಅವರ ಯುದ್ಧಗಳ ವೃತ್ತಾಂತವಲ್ಲ.! ಅದು ಭೌತ ಪರಿಸ್ಥಿತಿ ಸಾಮಾಜಿಕ ಸಂಸ್ಥೆ, ದರ್ಶನ ಮತಧರ್ಮ, ಕಲೆ, ಸಾಹಿತ್ಯ ಮುಂತಾದ ಎಲ್ಲಾ ವಿಷಯಗಳನ್ನು ಪರಿಶೀಲಿಸುತ್ತದೆ."[೬]

ಹೀಗಾಗಿ ಒಬ್ಬ ವ್ಯಕ್ತಿ ಇಲ್ಲವೇ ಒಂದು ಸಮುದಾಯದ ಪ್ರತೀಕವಾದ ಒಂದು ರಾಷ್ಟ್ರದ ಚಿತ್ರಣವನ್ನು ಇತಿಹಾಸ ರೂಪಿಸುತ್ತದೆ. ಕಲಾತ್ಮಕವಾದ ಚಿತ್ರಣವನ್ನೂ ಇತಿಹಾಸ ನೀಡುತ್ತದೆ. ಇತಿಹಾಸವು ವರ್ತಮಾನದ ಪೂರ್ವಾನುಭವದಂತೆ ಕೆಲಸ ಮಾಡುತ್ತದೆ. ಅದು ಇದ್ದ ಸ್ಥಿತಿಯನ್ನು ಅಧ್ಯಯನಕ್ಕೆ ಒಳಪಡಿಸಿ, ಆ ಮೂಲಕ ಲಭ್ಯ ಅನುಭವ ಚಿತ್ರಣದಿಂದ ಇರುವ ಸ್ಥಿತಿ-ಗತಿಗಳನ್ನು ಸುಧಾರಿಸಲು ನೆರವಾಗುತ್ತದೆ.

ಇತಿಹಾಸದಂತೆ ಸಾಹಿತ್ಯವೂ ಗತಕಾಲದ ಕಲಾತ್ಮಕ ಅಭಿವ್ಯಕ್ತಿಯ ಒಂದು ಮಾರ್ಗವಾಗಿದೆ. ಚರಿತ್ರೆಯು ಸಾಹಿತ್ಯದ ಒಂದು ಭಾಗವಾಗಿದೆ. "ಮೂಲಾಧಾರಗಳನ್ನು ಬಳಸಿ ಕಲ್ಪನಾಕ್ರಮದ ಮೂಲಕ ಗತಕಾಲವನ್ನು ಪುನರ್‌ರಚಿಸುವ ಪರ್ಯಾಯಲೋಕದ ಶಕ್ತಿ ಮತ್ತು ಸೊಗಸಾದ ನಿರೂಪಣೆಯಲ್ಲಿ ಇತಿಹಾಸವು ಕಲೆಯಾಗಿದೆ ಎಂಬುದು ತಿಳಿದು ಬರುತ್ತದೆ. ಅದು ಅಸಮಾನ ಘಟನೆ ಹಾಗೂ ವ್ಯಕ್ತಿತ್ವಗಳನ್ನು ಕುರಿತು ವಿಚಾರ ಮಾಡುವುದರಿಂದ ಅದು ಕಲೆಯೇ ಆಗುತ್ತದೆ." [೭]

ಕಲೆಯೇ ಆಗಿರತಕ್ಕ ಇತಿಹಾಸವನ್ನು ಐತಿಹಾಸಿಕವಾಗಿಯೇ ಅಧ್ಯಯನ ಮಾಡುವುದು ಒಂದು ವಿಧವಾದರೆ, ಅದನ್ನು ಸಾಹಿತ್ಯಿಕ ದೃಷ್ಟಿಕೋನದಿಂದ ಅಧ್ಯಯನ ಮಾಡುವುದು ಇನ್ನೊಂದು ಬಗೆ.

"ಇತಿಹಾಸವು ಮಾನವ ಜೀವನದ ದಾಖಲೆಯಾದರೆ ಸಾಹಿತ್ಯವು ಅದರ ಪ್ರತಿಬಿಂಬ...ವಿವಿಧ ಕಾಲಗಳಲ್ಲಿ ತಲೆದೋರಿದ ಪದ್ಯಕಥೆ, ಕಾದಂಬರಿ, ನಾಟಕ....ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಆ ಕಾಲಗಳ ಸಾಮಾಜಿಕ ಜೀವನದ ಎಲ್ಲಾ ಮುಖಗಳಿಗೆ ಸಂಬಂಧಪಟ್ಟ ವಿವರಗಳನ್ನು ನೋಡಬಹುದು. ಅವುಗಳು ಮುಖ್ಯವಾಗಿ ಸಾಮಾಜಿಕ ಇತಿಹಾಸಕಾರನಿಗೆ ಸಮೃದ್ಧ ಸುಗ್ಗಿ ಬೆಳೆಯುವಂಥ ಪ್ರಮಾಣಗಳನ್ನು ಒದಗಿಸಿಕೊಡುತ್ತವೆ." [೮]

ಸಾಹಿತ್ಯವು ಒಂದು ಕಾಲದ ಸಮಗ್ರ ಆಗುಹೋಗುಗಳಿಂದ ಪ್ರೇರಿತಗೊಳ್ಳುವುದು ಸಹಜ. ಹಾಗಾಗಿಯೇ ಅದು ಆ ಕಾಲದ ಕೂಸಾಗಿ ಬೆಳೆದುಬರುತ್ತದೆ. ನಿರ್ದಿಷ್ಟ ಅವಧಿಯ ಪ್ರಭಾವಕ್ಕೆ ಒಳಗಾಗಿರುವ ಸಾಹಿತ್ಯ ಕೃತಿಗಳು ಆ ಅವಧಿಯ ನಡವಳಿಕೆಗಳನ್ನು ತನ್ನ ಆಂತರ್ಯದಲ್ಲಿ ಕ್ರೋಢೀಕರಿಸಿಕೊಂಡಿರುತ್ತದೆ.

ಅದು ಕಾಲದ ಪ್ರತಿಬಿಂಬವಾಗಿ ಇತಿಹಾಸದ ಅಧ್ಯಯನಕ್ಕೆ 'ವಸ್ತು'ಗಳನ್ನು ಒದಗಿಸಿಕೊಡುತ್ತದೆ.

ಆದ್ದರಿಂದಲೇ ಇತಿಹಾಸದ ಆಕರ್ಷಕ ನಿರೂಪಣೆಗೆ ಸಾಹಿತ್ಯದ ಅಡಿಗಲ್ಲು ಬೇಕಾಗುತ್ತದೆ. ಸಾಹಿತ್ಯಿಕ ಮಾರ್ಗದಲ್ಲಿ ಇತಿಹಾಸ ಪ್ರತ್ಯೇಕತೆ ಹಲವನ್ನು ಅಖಂಡಗೊಳಿಸಿದ ರಸವತ್ತಾದ ನೈಜ ಕಥಾನಕವಾಗಿ ರೂಪುಗೊಳ್ಳುತ್ತದೆ.

'ಇತಿಹಾಸ, ಇತಿಹಾಸದ ಬಗ್ಗೆಯೇ ಮಾತನಾಡಲಾರದು' ಎಂಬುದು ವಿದ್ವಾಂಸರ ಅಭಿಪ್ರಾಯ. ಸಾಹಿತ್ಯವೆಂಬುದು ವಿಘಟಿತ ಐತಿಹಾಸಿಕ ಘಟನೆಗಳನ್ನು ಸಮಗ್ರವಾಗಿ ಒಗ್ಗೂಡಿಸಿ ರಸವತ್ತಾಗಿ ಕಟ್ಟಿಕೊಡುವ ಕಾರಣಕ್ಕಾಗಿ ಅದು ಹಲವಾರು 'ಮಿಥ್'ಗಳನ್ನೂ, ಅನಾವಶ್ಯಕ, ಅಸಂಬಂಧಿತ ರಸಗತೆಗಳನ್ನು ಸೇರಿಸಲೆತ್ನಿಸುತ್ತದೆ ಎನ್ನಲಾಗದು. 'ಗತ'ವನ್ನು ರಸಪೂರ್ಣವಾಗಿ ನಿರೂಪಿಸುವ ಜೊತೆಗೆ ಘಟನಾವಳಿಗಳ ನಡುವಿನ ಸೇತುವೆಯಾಗಿ, ತನ್ನ ಸಮಗ್ರತೆಯನ್ನು ತೋರಿಸಿಕೊಡುತ್ತದೆ ಎನ್ನಬಹುದು. ಈ ರಸ ಪೂರಣ ಮಾಡುವ ಮುಖೇನ ಆಕರ್ಷಕವನ್ನಾಗಿಸುವ ಶಕ್ತಿ ವಿಶೇಷತೆಯಿಂದಲೇ ಮೀಮಾಂಸಕರು ಸಾಹಿತ್ಯವೆಂದರೆ, 'ರಸಾನುಭೂತಿಯ ಸುಂದರ ಅಭಿವ್ಯಕ್ತಿ' ಎಂಬ ವ್ಯಾಖ್ಯೆಯನ್ನು ನೀಡಿದ್ದರೆನ್ನಬಹುದು.

ಜಾಗತಿಕ ಮಟ್ಟದಲ್ಲಿ ಹೆಸರುವಾಸಿಯಾಗಿರುವ ಕಾರ್ಲೈಲ್, ಗಿಬ್ಬನ್, ಮೆಕೋಲೆ ಮುಂತಾದವರ ಇತಿಹಾಸ ಗ್ರಂಥಗಳಿಂದ ಇತಿಹಾಸ ಉತ್ತಮವಾದ ಸಾಹಿತ್ಯದಷ್ಟೇ ಆಕರ್ಷಕವಾಗಿಯೂ, ಮೌಲ್ಯವುಳ್ಳದ್ದೂ ಆಗಿರಲು ಸಾಧ್ಯ ಎಂಬುದನ್ನು ಕಂಡುಕೊಳ್ಳಬಹುದು.

"ಸಾಹಿತ್ಯವು ಮನುಷ್ಯನ ಸನ್ನಿವೇಶ ವರ್ತನೆ, ಪ್ರತಿವರ್ತನೆ ಮತ್ತು ಅವುಗಳಿಂದ ತೋರುವ ಅಶಯ ಹಾಗೂ ಉದ್ದೇಶಗಳ ನಿರೂಪಣೆಯಾಗಿರುತ್ತದೆ. ಇಂಥ ನಿರೂಪಣೆಯ ಸಂಗತಿಗಳು ಕೇವಲ ಕಲ್ಪಿತಗಳಾಗಿದ್ದರೆ ಅದು ಕಾವ್ಯವೋ, ನಾಟಕವೋ ಅಥವಾ ಕಾದಂಬರಿಯೋ ಆಗುತ್ತದೆ. ಆದರೆ ಅದೇ ಘಟನೆಯು ವಾಸ್ತವ ಪ್ರಪಂಚವಾಗಿದ್ದರೆ ಅದು ಚರಿತ್ರೆಯೆನಿಸುತ್ತದೆ. ಚರಿತ್ರೆ ಮತ್ತು ಸಾಹಿತ್ಯಗಳೆರಡಕ್ಕೂ ಇರುವ ಗುಣ ಒಂದೇ. ಅದೇನೆಂದರೆ 'ಮನುಷ್ಯನ ಸ್ವಭಾವ', ಆದ್ದರಿಂದ ಚರಿತ್ರೆ ಮತ್ತು ಸಾಹಿತ್ಯಗಳ ಅರ್ಥ ವ್ಯಾಪ್ತಿಯನ್ನು ವಿಚಾರ ಮಾಡಿದಾಗ ಮನುಷ್ಯನ ಸ್ವಾಭಾವದ ಊಹಾಪೋಹ ಕಲ್ಪನೆಯ ವರ್ಣನೆಯೇ ಶುದ್ಧ ಸಾಹಿತ್ಯವೆಂದು, ಅದರ ಯಾಥಾವತ್ತಾದ ವರದಿಯೇ ಚರಿತ್ರೆ ಎಂದೂ ಸಂಕ್ಷಿಪ್ತವಾಗಿ ತಿಳಿದು ಬರುತ್ತದೆ."[೬]

ಸಾಹಿತ್ಯ ಮತ್ತು ಚರಿತ್ರೆಯಲ್ಲಿ 'ಮನುಷ್ಯ' ಮತ್ತು ಆತನ 'ಜೀವನ' ಕೇಂದ್ರದಲ್ಲಿರುತ್ತದೆ. ಉಳಿದ ಎಲ್ಲಾ ಘಟನಾವಳಿಗಳು ಆ ಕೇಂದ್ರದ ಸುತ್ತ

ಸುತ್ತುತ್ತಿರುತ್ತವೆ. ಕೇಂದ್ರ-ಪರಿಧಿಗಳ ಈ 'ಪರಿಭ್ರಮಣ' ಕ್ರಿಯೆಯಲ್ಲಿ ಇತಿಹಾಸ ರೂಪುಗೊಳ್ಳುತ್ತದೆ.

ಸಾಹಿತ್ಯ ಮತ್ತು ಇತಿಹಾಸಕ್ಕೆ ಮೂಲ ಸಾಮಾಗ್ರಿ ಮಾನವನೇ. ಆದರೂ, "ಇತಿಹಾಸ ಘಟನೆಗಳನ್ನು ಅತಿ ವಾಸ್ತವವಾಗಿ ನಿರೂಪಿಸುತ್ತದೆ. ಸಾಹಿತ್ಯ ಅದನ್ನು ಕಥೆಕಟ್ಟಿ ರಮ್ಯ ಮಾಡಿ ಅಭಿವ್ಯಕ್ತಿಸುತ್ತದೆ." [೧೦]

"ಇತಿಹಾಸ ಪ್ರತಿಚಲನೆಗೂ ಸಾಕ್ಷಿಯನ್ನು ಅಪೇಕ್ಷಿಸುತ್ತದೆ. ಅದಕ್ಕೆ ಬದ್ಧವಾಗಿರುತ್ತದೆ. ಸಾಹಿತ್ಯ ವ್ಯಕ್ತಿಯ ಚಲನೆಯ ಹಿಂದಿರುವ ಮಾನವ ಮನಸ್ಸು ಒಂದು ಸನ್ನಿವೇಶದಲ್ಲಿ ಏನೇನೂ ಸ್ಪಂದನೆಗಳನ್ನು ಅನುಭವಿಸಿತು ಎಂಬುದು ಮುಖ್ಯವಾಗುತ್ತದೆ. ಇತಿಹಾಸದಲ್ಲಿ ತಾತ್ವಿಕ ವಿಚಾರಗಳು ಹೇಗೆ ಚಿಂತನೆಗೆ ಅನಿವಾರ್ಯವಾಗಿ ಒಳಗಾಗುತ್ತದೋ ಹಾಗೆಯೇ ಸಾಹಿತ್ಯದಲ್ಲೂ ಕೂಡ ತಾತ್ವಿಕ ವಿಚಾರಗಳು ಚಿಂತನೆಗೆ ಒಳಪಡುತ್ತದೆ" [೧೧]

ಮನುಷ್ಯನೇ ಸಾಹಿತ್ಯ ಮತ್ತು ಇತಿಹಾಸದ ನಡುವೆ ಸಂಬಂಧ ಕಲ್ಪಿಸುವ ಕೇಂದ್ರ ಪಾತ್ರದಲ್ಲಿರುವಾಗ, ಅವನ ಕುರಿತ ಶೋಧ ಸಾಹಿತ್ಯ ಪ್ರಕಾರವಾದ ಕಾದಂಬರಿಯಲ್ಲೂ ಸಾಧ್ಯ. ಪ್ರಸ್ತುತ ಅಧ್ಯಯನ ವಸ್ತುವಾಗಿಟ್ಟುಕೊಂಡಿರುವ ನಿರಂಜನರ ಕಲ್ಯಾಣಸ್ವಾಮಿ. ಒಂದು ಐತಿಹಾಸಿಕ ವ್ಯಕ್ತಿಯೊಬ್ಬನನ್ನು ಕೇಂದ್ರವಾಗುಳ್ಳ ಕಾದಂಬರಿಯಾಗಿದೆ. ಜನ ಸಾಮಾನ್ಯರ ಬದುಕಿನಲ್ಲಿ ಧಾರ್ಮಿಕ ವಿಧಿ ಆಚರಣೆ ಸಂದರ್ಭದಲ್ಲಿ ಪ್ರಭುತ್ವಕ್ಕೆ ಮಾತ್ರ ಅವಕಾಶವಿತ್ತು. ಆ ಪ್ರಭುತ್ವವನ್ನು ಮೀರಿದ, ಕೆಲವೊಮ್ಮೆ ಅದಕ್ಕೆ ಅಧೀನ ಅಥವಾ ವಿರುದ್ಧವಾಗಿರುವ ಪಾತ್ರಗಳಿಗೆ ಒತ್ತುಕೊಡಲು ಈ ಕಾದಂಬರಿಯೂ ಸೇರಿದಂತೆ ಇತರ ಸಾಹಿತ್ಯ ಪ್ರಕಾರಗಳಿಗೆ ಸಾಧ್ಯವಾಗಿದೆ.

"ಇತಿಹಾಸದ ರಚನೆಯಲ್ಲಿ ಮತ್ತು ಅಧ್ಯಯನದ ಸಂದರ್ಭದಲ್ಲಿ ಸಾಹಿತ್ಯ ಜ್ಞಾನ ನೆರವೀಯುತ್ತದೆ. ಇತಿಹಾಸ ರಚನೆಗೆ ಆಧಾರಗಳು ಅಂತರ್ ಮತ್ತು ಬಾಹ್ಯ ಎಂದು ವಿಗಂಡಿಸಲಾಗುತ್ತದೆ. ಬಾಹ್ಯಾಧಾರದ ಗುಂಪಿಗೆ 'ಸಾಹಿತ್ಯ' ಒಂದು ಪ್ರಮುಖ ಆಧಾರವಾಗಬಲ್ಲದು... ಯಾವುದೇ ದೇಶದ ಇತಿಹಾಸವನ್ನು ರಚಿಸಲು ಸಾಹಿತ್ಯ ಒಂದು ಪ್ರಮುಖ ಆಧಾರವಾಗಿದೆ. "ನಿರಂತರವಾದ ಮಾನವ ಬದುಕು ಕೆನೆಕಟ್ಟಿರುವುದು ಸಾಹಿತ್ಯದಲ್ಲಿ ಮಾತ್ರವೇ. ಒಂದು ದೇಶದ ರಾಜಕೀಯ ಹಾಗೂ ಸಾಂಸ್ಕೃತಿಕ ಬದುಕು ಅಂತರ್‌ಗತವಾಗಿ ಹರಿದು ಬಂದಿರುವುದು ಆ ದೇಶದ ಸಾಹಿತ್ಯದಲ್ಲಿಯೇ ಎಂಬುದು ಸತ್ಯ"ವೆಂಬ ಶಿವರಾಮಯ್ಯನವರ ಹೇಳಿಕೆ ಗಮನಾರ್ಹವಾದುದು. ಮಹಾಭಾರತ, ರಾಮಾಯಣಗಳಲ್ಲಿ, ಇಲಿಯಡ್, ಒಡೆಸ್ಸಿ ಕಾವ್ಯಗಳಲ್ಲಿ ಚರಿತೆಯ ಅಂಶಗಳೂ ಸೇರಿರುವುದು ಸರಿಯಷ್ಟೆ." [೧೨]

ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಕಲ್ಯಾಣಸ್ವಾಮಿಯನ್ನು ಬರಿಯ ಸಾಹಿತ್ಯ ಕೃತಿಯೊಂದರ ನಾಯಕ ಪಾತ್ರವನ್ನಾಗಿ ಗ್ರಹಿಸುವುದರ ಜೊತೆಗೆ, ಅವನನ್ನು ಒಬ್ಬ ಪ್ರಜಾಕೇಂದ್ರಿತ ಸ್ಥಳೀಯ ಚರಿತ್ರೆಯ ನಾಯಕನನ್ನಾಗಿಯೂ ಪರಿಚಯಿಸಿ, ವಿಶ್ಲೇಷಿಸುವ ವ್ಯಾಪ್ತಿಯನ್ನು ಇಟ್ಟುಕೊಂಡಿದೆ.

ಇಲ್ಲಿ ಸಾಹಿತ್ಯವೆಂಬುದಕ್ಕೆ ಚರಿತ್ರೆಯೇ ಆಧಾರ ಎಂಬ ಮಾತು ಖಚಿತವಷ್ಟೆ. ಏಕೆಂದರೆ, ನಿರಂಜನರ ಬಹುದಿನಗಳ ನಿರಂತರ ಅಧ್ಯಯನದ ಫಲವಾಗಿ ಕಲ್ಯಾಣಸ್ವಾಮಿಯ ಪಾತ್ರವನ್ನು ಅವರು ತಮ್ಮ ಕಾದಂಬರಿಯಲ್ಲಿ ಕಂಡುಕೊಳ್ಳಲು ಸಾಧ್ಯವಾಯಿತು. ಹಾಗೆಯೇ ಚರಿತ್ರೆಗೂ ಸಾಹಿತ್ಯ ಆಧಾರವಾಗುತ್ತದೆ ಎನ್ನುವುದನ್ನು ಈ ಅಧ್ಯಯನ ಸಾಕ್ಷೀಕರಿಸುವ ಪ್ರಯತ್ನ ಮಾಡುತ್ತದೆ. ಕಲ್ಯಾಣಸ್ವಾಮಿ ಕಾದಂಬರಿಯಲ್ಲಿ ವ್ಯಕ್ತನಾಗಿರುವ ಪುಟ್ಟ ಬಸವ ಸ್ಥಳೀಯ ಚರಿತ್ರೆಯಲ್ಲಿ 'ಕಲ್ಯಾಣಸ್ವಾಮಿ'ಯಾಗಿ ರೂಪುಗೊಳ್ಳುವ ಬಗೆಗೆ ಇದು ಬಹುನೆಲೆಯ ಒಳನೋಟಗಳನ್ನು ನೀಡುತ್ತದೆ.

"ಸಾಹಿತ್ಯವು ಒಂದು ಕಾಲದ, ಒಂದು ದೇಶದ, ಒಂದು ಜನಾಂಗದ ಹೃದಯವನ್ನು ಮಿಡಿಯುತ್ತದೆ. ಹಾಗೆಯೇ ಜನತೆಯ ಆಸೆ–ಆಕಾಂಕ್ಷೆಗಳನ್ನು, ಮನೋಭಾವಗಳನ್ನು ಅವರು ಬದುಕಿ ಬಾಳಿದ ರೀತಿಯನ್ನು ಬಿಂಬಿಸುತ್ತದೆ. ಅವರು ನಂಬಿದಂತಹ ಮೌಲ್ಯಗಳನ್ನು ಸಂಕ್ಷಿಪ್ತವಾಗಿ ಸೂಚಿಸುತ್ತದೆ." [೧೩]

"ಚರಿತ್ರೆಯ ಅಡಿಯಲ್ಲಿ ಜೀವನದ ಆಗು–ಹೋಗುಗಳನ್ನು ಹೇಳುತ್ತಲೇ ಸಾರ್ವತ್ರಿಕ ಮೌಲ್ಯದ ಪ್ರತಿಪಾದನೆಯನ್ನು ಮಾಡಬೇಕಾಗುತ್ತದೆ." [೧೪] ಎಂಬ ಆಭಿಪ್ರಾಯದಂತೆ ನಿರಂಜನರು ಕಲ್ಯಾಣಸ್ವಾಮಿಯ ಜೀವನ ವೃತ್ತಾಂತವನ್ನು ಕಥಾನಕವಾಗಿ ನಿರೂಪಿಸುವುದರ ಜೊತೆಗೆ ರಾಜಾಧೀನವಾಗಿ ಆತ ಮಾಡಿರುವ ಸಾಧನೆ, ಸಾಹಸಗಳನ್ನು ಹೇಳುತ್ತಾ, ಅವನನ್ನೇ ಕೇಂದ್ರೀಕರಿಸಿಕೊಂಡ ಹೊಸ ಸ್ಥಳೀಯ ಚರಿತ್ರೆಗೆ ನಾಂದಿ ಹಾಡುತ್ತಾರೆ. ಇದು ಕಲ್ಯಾಣಸ್ವಾಮಿ ಮತ್ತು ಅವನ ಜೀವನ ಮೌಲ್ಯಗಳು ಸಾರ್ವತ್ರಿಕರಣಗೊಂಡ ಬಗೆಯಾಗಿದೆ.

**ಐತಿಹಾಸಿಕ ಕಾದಂಬರಿಗಳು ಮತ್ತು ಕಲ್ಯಾಣಸ್ವಾಮಿ:**

ಇಂಗ್ಲಿಷಿನ 'ನಾವೆಲ್' ಪ್ರಕಾರಕ್ಕೆ ಸಂವಾದಿಯಾಗಿರುವ ಕನ್ನಡದ ಕಾದಂಬರಿ ಪ್ರಕಾರಕ್ಕೆ ಹಲವು ವಿಭಿನ್ನತೆಗಳಂತೆ ಸಾಮ್ಯತೆಗಳೂ ಇವೆ. ಹಾಗಾಗಿ 'ನಾವೆಲ್' ಪ್ರಕಾರದ ನಿರ್ವಚನಗಳು ಹೆಚ್ಚು ಕಡಿಮೆ ಕಾದಂಬರಿ ಪ್ರಕಾರದ ನಿರ್ವಚನವೂ ಆಗಿದೆ. ಆದರೆ ಈ ಪ್ರಕಾರಗಳ ವೈಶಿಷ್ಟ್ಯದಿಂದಾಗಿ ಇವುಗಳ ನಿರ್ವಚನೆ ಮತ್ತು ವಿವೇಚನೆ ಸ್ವಲ್ಪ ಕಷ್ಟ.

ಹೆನ್ರಿ ಜೇಮ್ಸ್ ಪ್ರಕಾರ "ಕಾದಂಬರಿ ಎಂದರೆ ಘಟನೆಗಳು ಅವುಗಳನ್ನು ಒಳಗೊಂಡ ಪಾತ್ರಗಳು ಮತ್ತು ಪಾತ್ರಗಳನ್ನು ಒಳಗೊಂಡ ಚಿತ್ರಕೃತಿ." [೧೫]

ಕರ್ನಾಟಕ ಕನ್ನಡ ವಿಷಯ ವಿಶ್ವಕೋಶದಲ್ಲಿ ಹೇಳಿರುವಂತೆ ಒಂದು ಮಹತ್ವದ ಅರ್ಥದ ಐಕ್ಯ ಸಾಧಿತವಾಗುವಂತೆ ಒಂದಕ್ಕೊಂದು ಹೊಂದಿಸಿದ ಕಾಲ್ಪನಿಕ ಸನ್ನಿವೇಶಗಳ ಶ್ರೇಣಿಯ ವೃತ್ತಾಂತವೇ ಕಾದಂಬರಿಯಾಗಿದೆ.

ಫರ್ಡಿನಂಡ್ ಕಿಟೆಲ್ ಅಭಿಪ್ರಾಯಿಸುವಂತೆ ವಾಸ್ತವತೆಯನ್ನು ಆಧರಿಸಿದ ಸಾಕಷ್ಟು ದೀರ್ಘವಾದ ಮತ್ತು ತನ್ನಷ್ಟಕ್ಕೆ ತಾನೇ ಸಂಪೂರ್ಣತೆ ಪಡೆದ ಕಲ್ಪಿತ ಗದ್ಯಕಥೆ ಕಾದಂಬರಿಯಾಗುತ್ತದೆ.

ಪಾಶ್ಚಾತ್ಯ ವಿದ್ವಾಂಸ ಝೀನೆ ಹೇಳುವಂತೆ 'ಕಾದಂಬರಿ' ಎಂಬುದು ಒಂದರ ಹಿಂದೊಂದು ಬರುವಂತಹ ಸಂಗತಿಗಳ ನಿರೂಪಣೆಯಾಗಿರದೆ, ಸಂಘಟನೆಗೊಂಡ ಆನ್ವಯಿಕ ಘಟಕಗಳಾಗಿವೆ. ಕಾದಂಬರಿಯಲ್ಲಿ ಚಿತ್ತವೃತ್ತಿ (ಕಲ್ಪನೆ) ಏಕರೂಪವಾಗಿರದೆ, ಬಹುರೂಪದಲ್ಲಿರುತ್ತದೆ ಎನ್ನುವುದು ಝೀನೆಯ ಅಭಿಪ್ರಾಯ.

ಇಂತಹ ಶಾಬ್ದಿಕ ಸಂದೇಶವನ್ನು ಕಲಾಕೃತಿಯನ್ನಾಗಿ ಪರಿವರ್ತಿಸುವ ಗುಣ ಸಾಹಿತ್ಯ ಕಥೆಗಿರುತ್ತದೆ.

"ಕಾದಂಬರಿ ಒಂದು ಕಾಲ್ಪನಿಕ ಸೃಷ್ಟಿ. ಕಾದಂಬರಿಕಾರನೊಬ್ಬನ ದರ್ಶನ, ಕಲಾವಿದನೊಬ್ಬನ ದರ್ಶನ ಅಷ್ಟೆ. ಆದ್ದರಿಂದ ಕಾದಂಬರಿಯನ್ನು ಚರಿತ್ರೆ, ಪುರಾಣಗಳಿಗೆ EQUATE ಮಾಡಿ ಓದಬಾರದು. ಷೇಕ್ಸ್‌ಫಿಯರ್, ಟಾಲ್‌ಸ್ಟಾಯ್, ಡಿಕ್ಸನ್ ಮೊದಲುಗೊಂಡು ಯಾವ ಶ್ರೇಷ್ಠ ಲೇಖಕನೂ ಹಾಗೆ ಚರಿತ್ರೆಗೆ ಪೂರಾ ನಿಷ್ಠನಲ್ಲ. ............It is not pure history But a work of fiction. ಆದ್ದರಿಂದಲೇ ಸಾಹಿತ್ಯ ವಿಮರ್ಶಕ ಕಾದಂಬರಿಯ ಒಳ ಜಗತ್ತಿನಲ್ಲಿ ಮೂಡಿ ಬಂದ ವಿವರಗಳಿಗೆ ಅವುಗಳ ಅಂತರ್ ಸಂಬಂಧದಲ್ಲಿ ಅಷ್ಟೊಂದು ಪ್ರಾಮುಖ್ಯ ನೀಡುವುದು. ಚಾರಿತ್ರಿಕ ಕಾದಂಬರಿಕಾರ ಇತಿಹಾಸಕಾರನಂತೆ ವಿವರಗಳನ್ನು ಜಡವಾಗಿ ಪೇರಿಸುತ್ತ ಹೋಗುವುದಿಲ್ಲ. ಒಂದು ಐತಿಹಾಸಿಕ ಸತ್ಯಕ್ಕೆ, ನೋಟಕ್ಕೆ, ಕಾಣ್ಕೆಗೆ ಅಪಚಾರವಾಗದ ಹಾಗೆ ಮತ್ತು ತನ್ನ ಸೃಜನಶೀಲ ಅಗತ್ಯಗಳಿಗೆ ಪೂರಕವಾಗುವಷ್ಟು ಮಾತ್ರ ವಿವರಗಳನ್ನು ಕಾದಂಬರಿಯ ಪರಿಕರಗಳಾಗಿ ಪರಿವರ್ತಿಸಿಕೊಳ್ಳುತ್ತಾನೆ ಮತ್ತು ಹೀಗೆ ವಿವರಗಳನ್ನು ಪರಿಕರಗಳಾಗಿ ಪರಿವರ್ತಿಸಿಕೊಳ್ಳುವುದರಲ್ಲಿ ಮಾತ್ರ ಸೃಜನಶೀಲನಾಗಿರುತ್ತಾರೆ. ಅವನ ನೋಟದ ಮೂಲನೆಲೆ ಇರುವುದೇ ಇಂಥ ಪರಿವರ್ತನೆಗಳಲ್ಲಿ. ಏಕೆಂದರೆ ಸೃಜನಶೀಲ ಲೇಖಕನೊಬ್ಬ ಚಾರಿತ್ರಿಕ ಸತ್ಯವನ್ನು ಮಂಡಿಸುವ ಕ್ರಮಕ್ಕೂ ಇತಿಹಾಸಕಾರನೊಬ್ಬ ಮಂಡಿಸುವ ಕ್ರಮಕ್ಕೂ ಮೂಲಭೂತ ವ್ಯತ್ಯಾಸಗಳಿರುತ್ತವೆ." [೧೬]

"ಸಾಹಿತ್ಯ ಪ್ರಕಾರಗಳಲ್ಲಿಯೇ ಐತಿಹಾಸಿಕ ಕೃತಿಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ಏಕೆಂದರೆ ಈ ಕೃತಿಗಳಲ್ಲಿ ಸಾಹಿತ್ಯ ಮತ್ತು ಇತಿಹಾಸಗಳೆರಡೂ ಸಂಧಿಸಿ ಘರ್ಷಿಸಿ, ಪರಸ್ಪರ ಪೂರಕವಾಗಿ ಒಂದು ವಿನೂತನ ಪಾಕವನ್ನು ಸಿದ್ಧಗೊಳಿಸುತ್ತವೆ. ಐತಿಹಾಸಿಕ ಕೃತಿಗಳು ಪ್ರಥಮತಃ ಸಾಹಿತ್ಯ ಕೃತಿಗಳೇ ಆದರೂ ಹಾಗೂ ಅವುಗಳನ್ನು ಅರ್ಥೈಸುವ, ಅಳೆಯುವ ಮಾನದಂಡಗಳೂ ಸಾಹಿತ್ಯವೇ ಆದರೂ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಆ ಕೃತಿಗಳಲ್ಲಿ ಇತಿಹಾಸದ ಸ್ವರೂಪದ ಬಗ್ಗೆಯೂ ಚಿಂತನೆ ಕಂಡುಬರುತ್ತದೆ. ಈ ದೃಷ್ಟಿಯಿಂದ – ಅಂದರೆ ಒಂದು ಕೃತಿಯಲ್ಲಿ ಇತಿಹಾಸವನ್ನು ಕುರಿತು ಕಂಡುಬರುವ ಪರಿಕಲ್ಪನೆಯ ದೃಷ್ಟಿಯಿಂದ–ನಾವು ಐತಿಹಾಸಿಕ ಕೃತಿಗಳನ್ನು ಸ್ಥೂಲವಾಗಿ ಹೀಗೆ ವಿಗಂಡಿಸಬಹುದು:

೧. ಇತಿಹಾಸವೆಂದರೆ ರಾಜ ಮಹಾರಾಜರ ವೈಯಕ್ತಿಕ ಏಳು–ಬೀಳಿನ ಕಥೆ, ಎಲ್ಲಾ ಸ್ತರಗಳಲ್ಲಿಯೂ ರಾಜ–ರಾಣಿಯರು ಜನಸಾಮಾನ್ಯರಿಗಿಂತ ಭಿನ್ನರಾಗಿದ್ದರೆಂದೂ, ಅವರ ಜೀವನದ ಆಗು–ಹೋಗುಗಳು ಮಹತ್ವಪೂರ್ಣವಾಗಿದ್ದುವೆಂದೂ ನಾವು ಭಾವಿಸಿರುವುದರಿಂದ ಇಲ್ಲಿ ಕೃತಿಕಾರನಿಗೆ ಇತಿಹಾಸ ಸಿದ್ಧವಸ್ತುವನ್ನು ಒದಗಿಸುತ್ತದೆ ಮತ್ತು ಅವನ ಲಕ್ಷ್ಯವೆಲ್ಲಾ ಈ ಅಸಾಮಾನ್ಯ ನಾಯಕ–ನಾಯಕಿಯರ ಆಮೋದ–ಪ್ರಮೋದ, ಧೈರ್ಯ–ಸ್ಥೈರ್ಯ ಹಾಗೂ ಜಯಾಪಜಯಗಳನ್ನು ಆದಷ್ಟು ರೋಚಕವಾಗಿ, ರೋಮಾಂಚಕವಾಗಿ ಪ್ರಸ್ತುತ ಪಡಿಸುವುದರಲ್ಲಿಯೇ ಇರುತ್ತದೆ. ಕನ್ನಡದ ಬಹುತೇಕ ಐತಿಹಾಸಿಕ ಕಾದಂಬರಿಕಾರರೆಲ್ಲಾ ಉದಾಹರಣೆಗೆ ಗಳಗನಾಥರಿಂದ ಹಿಡಿದು ಅ.ನ.ಕೃ, ವೀರ ಕೇಸರಿ, ತ.ರಾ.ಸು, ರಾ.ಶಿ, ಬಿ.ಎಲ್.ವೇಣು ಇತ್ಯಾದಿ ವರ್ಗಕ್ಕೇ ಸೇರುತ್ತಾರೆ. ತಮ್ಮ ಅಮೋಘ ನಿರೂಪಣಾ ಕ್ರಮದಿಂದ ಹಾಗೂ ರಂಜಿತ ಶೈಲಿಯಿಂದ ತ.ರಾ.ಸು., ಬೇರೆಯವರೆಲ್ಲರಿಗಿಂತ ಮೇಲೆ ನಿಲ್ಲುತ್ತಾರಾದರೂ, ಮೂಲತಃ ಅವರಿಗೂ ಇತಿಹಾಸವೆಂದರೆ ಮಹಾಪುರುಷರ ವೈಭವೀಕೃತ ಕಥೆಯೇ. ಮುಖ್ಯವಾಗಿ ಈ ವರ್ಗಕ್ಕೇ ಸೇರಿದ ಆದರೆ ಸ್ವಲ್ಪ ವಿಭಿನ್ನರಾಗಿ ತೋರುವವರೆಂದರೆ ದೇವುಡು." [೧೭]

೨. "ಮತ್ತೊಂದು ವರ್ಗದಲ್ಲಿನ ಕೃತಿಗಳಲ್ಲಿ ಐತಿಹಾಸಿಕ ವ್ಯಕ್ತಿಗಳಿಗಿಂತ ಮಿಗಿಲಾಗಿ ಇತಿಹಾಸದ ಚಲನೆಯ ಬಗ್ಗೆ ಗಂಭೀರ ಚಿಂತನೆ ಕಂಡುಬರುತ್ತದೆ. ಇಲ್ಲಿ ಇತಿಹಾಸವೆಂದರೆ ಯಾವ ತರ್ಕಕ್ಕೂ ಸಿಲುಕದ, ಕಾರ್ಯ ಕಾರಣ ಸಂಬಂಧ ಖಚಿತವಾಗಿ ಕಂಡುಬರದೆ, ಅಗೋಚರ ಹಾಗೂ ಆಕಸ್ಮಿಕ ಘಟನೆಗಳ ವೃತ್ತಾಂತ. ಈ ಪರಿಕಲ್ಪನೆಯನ್ನು ಇತಿಹಾಸಕಾರರು 'Cataclysmic Conception of history' ಎಂದು ಗುರುತಿಸುತ್ತಾರೆ." [೧೮]

೩. "ಕೆಲವು ಸಲ ಕೃತಿಕಾರನು ತನ್ನ ಪೂರ್ವ ನಿಶ್ಚಿತ ಸಿದ್ಧಾಂತಗಳಿಗೆ ಅಥವಾ ತತ್ತ್ವಗಳಿಗೆ ನಿದರ್ಶನವನ್ನಾಗಿ ಇತಿಹಾಸವನ್ನು ತನ್ನ ಕೃತಿಗಳಲ್ಲಿ ವ್ಯಾಖ್ಯಾನಿಸಬಹುದು. ಈ ನಿಲುವನ್ನು 'Didactic Conception of history' ಎನ್ನಬಹುದು." ಹಿಂದಿಯಲ್ಲಿ ಈ ಬಗೆಗಿನ ಹೆಚ್ಚು ಕೃತಿಗಳಿದ್ದರೂ, ಕನ್ನಡದಲ್ಲಿ ತೀರಾ ಕಡಿಮೆ. [೧೯]

ಕಾದಂಬರಿಯ ಪ್ರಕಾರಗಳನ್ನು ವಿವರಿಸಿಕೊಳ್ಳುವಾಗ ಅದರ 'ಚಾರಿತ್ರಿಕ ನಿರ್ದಿಷ್ಟತೆ'ಯು ಅಗತ್ಯವಾಗುತ್ತದೆ. ಕಾದಂಬರಿಯು ಒಂದು ಆಧುನಿಕ ಕಥನದ ಮಾದರಿಯಾಗಿರುವುದರಿಂದ ಅದರಲ್ಲಿ ವಿಶಿಷ್ಟ ಕಥಾ ಸಂವಿಧಾನವಿದೆ. ಇದು ಕಾಲ ಮತ್ತು ಪಾತ್ರವನ್ನು ನಿರ್ವಹಿಸುವ ಬಗೆಯಾಗಿದೆ.

"ನಾವೆಲನ್ನು ಸಾಧ್ಯವಾಗಿಸುವ ಚಾರಿತ್ರಿಕ ಸಂದರ್ಭವೇ ಬೇರೆ. ಲುಕಾಚ್ಸ್‌ನ ಪ್ರಕಾರ ಒಂದೇ ಮಹಾ ಕಾವ್ಯ ಪರಂಪರೆಯಿಂದ ಬಂದಿರುವ ಕಾದಂಬರಿ ಮತ್ತು ಮಹಾಕಾವ್ಯಗಳು ಭಿನ್ನವಾಗುವುದು ತಮ್ಮ ಲೇಖಕರ ಉದ್ದೇಶದಿಂದ ಮಾತ್ರವಲ್ಲ. ಅವು ಗದ್ಯದಲ್ಲಿವೆಯೋ ಪದ್ಯದಲ್ಲಿಯೋ ಎನ್ನುವ ತಾಂತ್ರಿಕ ಅಂಶದಿಂದಲೂ ಅಲ್ಲ. ಬದಲಾಗಿ ಈ ಕೃತಿಗಳ ರಚಯಿತರಾದ ಲೇಖಕರು ಎದುರಿಸಬೇಕಾಗಿರುವ ಐತಿಹಾಸಿಕ ವಾಸ್ತವದಿಂದ." [೨೦]

ಈ ಕಾರಣದಿಂದಲೇ ಡಿ.ಆರ್. ನಾಗರಾಜರ ಮಾತಿನಂತೆ ಕಾದಂಬರಿ ಎನ್ನುವುದು ಆಧುನಿಕ ಯುಗದ ಮಹಾಕಾವ್ಯವಾಗಿದೆ.

ಒಂದು ನಿರ್ದಿಷ್ಟ ಚಾರಿತ್ರಿಕ ಸಂದರ್ಭವನ್ನು ಆಧಾರವಾಗಿಟ್ಟು ಕೊಂಡು 'Novel' ಎನ್ನುವುದು ಕನ್ನಡದ ಆಧುನಿಕ ಕಥನ ಪ್ರಕಾರವಾದ ಕಾದಂಬರಿಯಾಗಿ ರೂಪು ತಳೆಯುತ್ತದೆ. ಈಗಾಗಲೇ ನಡೆದು ಹೋಗಿರುವ ಸಿದ್ಧವಸ್ತುವನ್ನು ಬಳಸಿ ಕಾದಂಬರಿ ಎನ್ನುವುದು ಐತಿಹಾಸಿಕ ನೆಲೆಯಲ್ಲಿ ಗುರುತಿಸಿಕೊಳ್ಳುತ್ತದೆ. ಐತಿಹಾಸಿಕ ಸಾಮಾಗ್ರಿಗಳನ್ನು ಕಾದಂಬರಿಗೆ ಅಳವಡಿಸಿಕೊಂಡಾಗ ಕಾದಂಬರಿಯ ಕಥನ ಕ್ರಿಯೆಯ ಮೂಲಧಾತು ನಿಶ್ಚಿತವಾಗಿದ್ದು, ಪಾತ್ರಗಳ ವ್ಯಕ್ತಿತ್ವದ ಬಗ್ಗೆ ಜನರಿಗೆ ನಿಶ್ಚಿತವಾದ ಒಂದು ಕಲ್ಪನೆಯಿರುತ್ತದೆ. ಸಮಕಾಲೀನ ಬದುಕಿನ ಸ್ಪಂದನೆಗಳಿಗೆ ಕಾದಂಬರಿ ಪಡಿನುಡಿಯಬೇಕಾಗುತ್ತದೆ.

"ಚಾರಿತ್ರಿಕ ಕಾದಂಬರಿಯೊಂದನ್ನು ಅಭ್ಯಾಸ ಮಾಡುವಾಗ ಚಾರಿತ್ರಿಕ ದಾಖಲೆಗಳನ್ನು ಎಷ್ಟರ ಮಟ್ಟಿಗೆ ಬಳಸಿಕೊಳ್ಳಬೇಕು ಎಂಬುದು ತುಂಬಾ ಗೊಂದಲದ ವಿವಾದಾಸ್ಪದ ಅಕಡೆಮಿಕ್ ಸಂಗತಿ. ಆದರೆ ಆ ವಿವರಗಳ ಆಯ್ಕೆ ಕಾದಂಬರಿಕಾರನೊಬ್ಬನ ಸೃಜನಶೀಲ ಆಯ್ಕೆ ಎಂಬುದನ್ನು ನಾವು ಮರೆಯಬಾರದು. ತನ್ನ ಸೃಜನಶೀಲ ಅಗತ್ಯಗಳಿಗಷ್ಟೇ ಅವನು ಪುರಾಣದಿಂದಾಗಲೀ

ಚರಿತ್ರೆಯಿಂದಾಗಲೀ, ಸಮಕಾಲೀನ ಜೀವನದಿಂದಾಗಿ ವಿವರಗಳನ್ನು ಆಯ್ಕೆ ಮಾಡಿಕೊಳ್ಳುವುದು. ಈ ಆವರಣವನ್ನು ಸ್ಥೂಲವಾಗಿ ಗುರುತಿಸಲು ಕಾದಂಬರಿಯೊಂದನ್ನು ಪೌರಾಣಿಕ, ಚಾರಿತ್ರಿಕ, ಸಾಮಾಜಿಕ ಎಂದು ಕರೆಯುತ್ತೇವೆಯೋ ಹೊರತು ಪುರಾಣ, ಇತಿಹಾಸ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಮನೋ ವಿಜ್ಞಾನಿಗಳಿಗೆ ಅವುಗಳು ಕಥಾರೂಪ ಕೊಡುತ್ತವೆ, ಬದಲಿಯಾಗುತ್ತವೆ ಎಂದಾಗಲೀ ಅಲ್ಲ." ೨೧

"ಮನುಷ್ಯ ಸ್ವಭಾವದ ಚಿತ್ರಣಗಳನ್ನು ನೀಡುತ್ತಲೇ, ಇತಿಹಾಸ ಪುರುಷರನ್ನು ವ್ಯಕ್ತಿ ನಿಷ್ಠವಾಗಿಯೂ ನೋಡಲು ಸಾಧ್ಯವಾಗುತ್ತದೆ. ಹಾಗೆ ನೋಡುವಾಗ ವೈಭವೀಕೃತ ಪಾತ್ರಗಳು ಸಾಮಾನ್ಯೀಕರಣಗೊಂಡು 'ಮಾನಸಿಕ ದೂರ' ಇಲ್ಲವಾಗಿ ಆ ಪಾತ್ರಗಳು ಸಮಕಾಲೀನ ಸಂದರ್ಭಕ್ಕೂ ಹತ್ತಿರವಾಗುತ್ತದೆ." ೨೨

ಇತಿಹಾಸದ ವಸ್ತುವನ್ನು ಬಳಸಿಕೊಂಡು ಕಾದಂಬರಿಯೊಂದು ಹೇಗೆ ಸಾಹಿತ್ಯಿಕವಾಗಿ ಮತ್ತು ಕಲಾತ್ಮಕವಾಗಿ ಅಭಿವ್ಯಕ್ತಿಯನ್ನು ಪಡೆದುಕೊಳ್ಳುತ್ತದೆ ಎಂಬುದು ಇತಿಹಾಸ ಹೇಳದಿರುವ ಮತ್ತು ಕಡೆಗಣಿಸಿರುವ 'ಮಾನವೀಯ ಮುಖ'ಗಳ ಅಥವಾ ಕೆಲವಾರು ಅಧ್ಯಯನ ಯೋಗ್ಯ ಪಾತ್ರಗಳ ಅನಾವರಣಕ್ಕೆ ಕಾರಣವಾಗುತ್ತದೆ.

ಇದರಿಂದಾಗಿ ಇತಿಹಾಸದ ಎಲ್ಲಾ ಎಲ್ಲೆಗಳನ್ನು, ಮೂಲೆಗಳನ್ನು ಸ್ಪರ್ಶಿಸಿ ವಿಮರ್ಶಿಸಿ, ಪರಿಪೂರ್ಣವಾಗಿ ಅಥವಾ ಪರಿಷ್ಕೃತವಾಗಿ ಹೊಸ ಚರಿತ್ರೆಯನ್ನು ಕಟ್ಟುವುದು ಸಾಧ್ಯವಾಗುತ್ತದೆ.

ಇಂತಹ ಇತಿಹಾಸದ ರಚನೆಯಲ್ಲಿ ಮತ್ತು ಅಧ್ಯಯನದ ಸಂದರ್ಭದಲ್ಲಿ ಸಾಹಿತ್ಯಜ್ಞಾನ ನೆರವೀಯುತ್ತದೆ. ಇತಿಹಾಸವೆನ್ನುವುದು ಕೇವಲ ಗತಕಾಲಕ್ಕೆ ಸೀಮಿತವಾದ ಘಟನೆಯಲ್ಲ. ಸಾಹಿತ್ಯ ಮತ್ತು ಇತಿಹಾಸ ವಿಭಿನ್ನ ಕ್ಷೇತ್ರಗಳಾದರೂ ಮನುಷ್ಯನ ಶೋಧನೆಯಲ್ಲಿ ಮಾತ್ರ ಭಿನ್ನತೆ ಇಲ್ಲ. ಪಂಪ, ರನ್ನ, ವಚನಕಾರರು, ದಾಸರು ಸೇರಿದಂತೆ ಪ್ರಾಚೀನ ಕರ್ನಾಟಕದಲ್ಲಿ ಸಾಹಿತ್ಯವೆನ್ನುವುದು ಬಹಳಷ್ಟು ಸಲ ಇತಿಹಾಸವನ್ನು ಪ್ರಕಟಿಸುವ ಮಾಧ್ಯಮವಾಗಿತ್ತು. ಇದಕ್ಕೆ ಐತಿಹಾಸಿಕ ಕಾದಂಬರಿಯೂ ಹೊರತಾಗಿಲ್ಲ. ಇಂದು ಒಂದು ಐತಿಹಾಸಿಕ ಕಾದಂಬರಿಯ ನಿರ್ಮಿತಿ ಎನ್ನುವುದು ಒಂದು ಇತಿಹಾಸದ ದಾಖಲೀಕರಣ ಮತ್ತು ಸಂಶೋಧನೆಯೇ ಆಗಿರುತ್ತದೆ. ಇದಕ್ಕೆ ಪ್ರಸ್ತುತ ಕಲ್ಯಾಣಸ್ವಾಮಿ ಹೊರತಾಗಿಲ್ಲ.

"ಇತಿಹಾಸ ಮತ್ತು ಪುರಾಣಗಳಿಂದ ವಸ್ತುವನ್ನು ಎತ್ತಿಕೊಂಡಾಗ ಇಂಥ ಆಯ್ಕೆಗೆ ಕಾರಣ, ಪ್ರಭಾವಗಳು ಹಲವಾರು ಇರುತ್ತವೆ. ಇದು ಮುಖ್ಯವಾಗಿ ನಾಟಕಕಾರನ (ಕೃತಿಕಾರನ) ದೃಷ್ಟಿ-ಧೋರಣೆಗಳನ್ನು ಅವಲಂಬಿಸಿರುತ್ತದೆ. ಆದರೂ

ಪುರಾಣ ಮತ್ತು ಇತಿಹಾಸಗಳಿಂದ ವಸ್ತುವಿನ ಆಯ್ಕೆಗೆ ಸ್ಥೂಲವಾಗಿ ಮೂರು ಕಾರಣಗಳನ್ನು ಗುರುತಿಸಿಕೊಳ್ಳಬಹುದು.

೧. ಹೊಸ ಅರ್ಥದ ಹೊಳಹು. ಅಂದರೆ ಪುರಾಣ ಅಥವಾ ಇತಿಹಾಸದ ಘಟನೆಗಳಿಗೆ ಹೊಸ ಅರ್ಥ ವಿವರಣೆ (New Interpretation) ನೀಡುವ ಮೂಲಕ ಹೊಸ ಆಯಾಮ ಕಲ್ಪಿಸುವುದು. ತನ್ಮೂಲಕ ವಸ್ತುವಿನ ಸಾರ್ವಕಾಲಿಕ ಗುಣವನ್ನು ಎತ್ತಿ ತೋರಿಸುವುದು.
೨. ಸತ್ವ ವಿಶೇಷ ಅಥವಾ ವಿಚಾರ ಬಲ. ಅಂದರೆ ಪೌರಾಣಿಕ ಅಥವಾ ಐತಿಹಾಸಿಕ ಸಂದರ್ಭದಲ್ಲಿ ಮೌಲಿಕ ಅಥವಾ ಮಹತ್ವಪೂರ್ಣ ಎನಿಸಿದನ್ನು ಪ್ರತ್ಯೇಕವಾಗಿ ಸಾಹಿತ್ಯಿಕ ಪುನರ್‌ಸೃಷ್ಟಿ ಮೂಲಕ ಯಾವುದೇ ಬದಲಾವಣೆಯಿಲ್ಲದೆ ಹೇಳಲೇಬೇಕು. ಎನ್ನಿಸುವಷ್ಟು ವಸ್ತು-ಸತ್ವದ ದೃಷ್ಟಿಯಿಂದ ಪ್ರಭಾವಶಾಲಿಯಾಗಿರಬಹುದು.
೩. ವಸ್ತುವಿನಲ್ಲಿ ಅಂತರ್ಗತವಾಗಿರುವ ಸಿದ್ಧ ನಾಟಕೀಯತೆ.

ಹೀಗೆ ವಸ್ತುವಿನಲ್ಲಿ ಸುಲಭವಾಗಿ ಲಭ್ಯವಿರುವ ನಾಟಕೀಯತೆ ಕೆಲವರಿಗೆ ಪೂರ್ಣ ಇತಿಹಾಸಗಳಿಗೆ ಕೈಹಚ್ಚಲು ಕಾರಣವಾದರೆ, ಇನ್ನು ಕೆಲವರಿಗೆ ಪುರಾಣ ಇತಿಹಾಸದ ಸಂದರ್ಭಗಳಲ್ಲಿ ಉಪಕತೆಯಾಗಿಯೋ, ಪ್ರಸಂಗವಾಗಿಯೋ ಬಂದು ಹೋಗುವ ಘಟನೆಗಳಲ್ಲಿನ ಸತ್ವ ವಿಶೇಷ ಕಾರಣವಾಗುತ್ತದೆ. ಇನ್ನು ಕೆಲವರಿಗೆ ಇಂಥ ಘಟನೆಗಳಲ್ಲಿ ಹೊಸ ಅರ್ಥ ಸ್ಫುರಿಸಿ ಅವುಗಳ ಪುನರ್ ಸೃಷ್ಟಿಯಾಗುತ್ತದೆ." [೨೩]

ಅರಿಸ್ಟಾಟಲ್ ಇತಿಹಾಸ ಮತ್ತು ಸಾಹಿತ್ಯ ಸಂಬಂಧವನ್ನು ಕುರಿತು ತನ್ನ ಕಾವ್ಯಮೀಮಾಂಸೆಯ ಕೃತಿಯಲ್ಲಿ ಹೇಳಿರುವಂತೆ, "ಒಂದು ಸಿದ್ಧ ವಸ್ತುವನ್ನು ನಿರೂಪಿಸುತ್ತದೆ. ಇನ್ನೊಂದು ಸಾಧ್ಯ ವಸ್ತುವನ್ನು ನಿರೂಪಿಸುತ್ತದೆ. ಆದ್ದರಿಂದ ಕಾವ್ಯವು ಇತಿಹಾಸಕ್ಕಿಂತ ಹೆಚ್ಚು ತಾತ್ವಿಕವೂ, ಗಂಭೀರಾರ್ಥವೂ ಆದುದು. ಏಕೆಂದರೆ ಅದರ ವಾಕ್ಯಗಳು ವಿಶ್ವ ಸಾಮಾನ್ಯ ಗುಣದವು, ಇತಿಹಾಸವಾದರೋ ವೈಯುಕ್ತಿಕವಾದವು, ನಿಜವಾದ ಇತಿಹಾಸದಿಂದ ವಸ್ತುವನ್ನು ಸ್ವೀಕರಿಸಿದರೂ ಕವಿ, ಕವಿಯಾಗಿಯೇ ನಿಲ್ಲುವನು." [೨೪]

ಮೇಲಿನ ಈ ಅಭಿಪ್ರಾಯದಂತೆ ನಿರಂಜನರ ಕಾದಂಬರಿಯ ಐತಿಹಾಸಿಕ ಘಟನೆ ಎಂಬುದು ಒಂದು ಸಿದ್ಧ ವಸ್ತು. ಕರ್ನಾಟಕದ ಕೊಡಗು ಪ್ರಾಂತ್ಯ ಮತ್ತು ಕರಾವಳಿಯ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ನಡೆದ ನೈಜ ಐತಿಹಾಸಿಕ ವಿದ್ಯಮಾನ. ಈ ವಿದ್ಯಮಾನವನ್ನು ಬಳಸಿಕೊಂಡು, ಅಪಾರ ಪೂರ್ವಾಧ್ಯಯನದ ಬೆಂಬಲದಿಂದ ಕಾದಂಬರಿಯೊಂದನ್ನು ರಚಿಸಿರುವುದು ಆ ಘಟನೆಗಳನ್ನು ಸಾಧ್ಯವಸ್ತುವನ್ನಾಗಿ ಪರಿವರ್ತಿಸಿದೆ. ಕಲ್ಯಾಣಸ್ವಾಮಿ ಈ ವಸ್ತುವಿನ

ಮುಖ್ಯವಾಹಿನಿಯಲ್ಲಿದ್ದಾನೆ. ಆದ್ದರಿಂದಲೇ ಈ ಕಾದಂಬರಿ ತದ್ಗತ ಘಟನಾವಳಿಗಳ ಮೂಲ ಮಾಹಿತಿಪೂರ್ಣ ಚರಿತ್ರೆಗಿಂತ ಹೆಚ್ಚು ತಾತ್ವಿಕವೂ, ಗಂಭೀರಾರ್ಥವೂ ಆಗಿದೆ ಎನ್ನಬಹುದು. ಪ್ರಭುತ್ವೇತರ ಶಕ್ತಿಯೊಂದು ಸಾಧಿಸಿರುವ ಸಾಹಸಗಳು ಇಲ್ಲಿ ಸಾರ್ವತ್ರಿಕಗೊಂಡು ವಿಶ್ವ ಸಾಮಾನ್ಯಗೊಳ್ಳುವುದನ್ನು ಗುರುತಿಸಬಹುದು.

ಕಲ್ಯಾಣಸ್ವಾಮಿಯ ವೈಯಕ್ತಿಕ ಮಾಹಿತಿ-ಕಥೆಗಳಿಂದ ನಿಜವಾದ ವಸ್ತುವನ್ನು ಸ್ವೀಕರಿಸಿದರೂ, ಅದರ ರೂಪಣೆ ಮತ್ತು ತಾತ್ವಿಕತೆಯ ದೃಷ್ಟಿಯಿಂದ ನಿರಂಜನರು ಉದಾತ್ತ ಕಾದಂಬರಿಕಾರರೆನಿಸುತ್ತಾನೆ. ನಿರಂಜನರ ಕಾದಂಬರಿ ಕಲ್ಯಾಣಸ್ವಾಮಿಯ ಪಾತ್ರ ಈ ಅಧ್ಯಯನದಲ್ಲಿ ಪುನರೂಪ ಪಡೆಯುವುದರೊಂದಿಗೆ, ಆತನ ಕಥೆ ಮರುನೋಟಕ್ಕೆ ಒಳಗಾಗಬೇಕಾಗಿರುವುದು ಇಲ್ಲಿನ ಉದ್ದೇಶ.

ರಾಜತ್ವದಿಂದ ಭಿನ್ನವಾಗಿ ಉಳಿದಿರುವ ಮತ್ತು ನಿರ್ಲಕ್ಷ್ಯಕ್ಕೆ ಒಳಗಾಗಿರುವ ಪ್ರಬಲ ಮತ್ತು ಉಲ್ಲೇಖಾರ್ಹ ಜನಸಾಮಾನ್ಯನೊಬ್ಬನ ಸಾಹಸಗಾಥೆಯ ಕಥಾನಕವನ್ನಿಟ್ಟುಕೊಂಡು ಹೊಸ ಸಾಧ್ಯತೆಯ ಸ್ಥಳೀಯ ಚರಿತ್ರೆ 'ಕಟ್ಟುವ' ನಿರಂಜನರ ಹಾದಿಯ ಅವಲೋಕನವಿದು.

ಇಂದಿನ ವಾಸ್ತವಿಕತೆ ನಾಳಿನ ಇತಿಹಾಸ. ನಾಳೆಯ ವಾಸ್ತವಿಕತೆ ಮತ್ತೆ ನಾಡಿದ್ದಿಗೆ ಇತಿಹಾಸವಾಗುತ್ತದೆ. ಸಾಹಿತ್ಯ ಈ ಹಿಂದು-ಇಂದು-ಮುಂದುಗಳನ್ನು ಹಿಡಿದಿಡಬಲ್ಲ ಮಾಧ್ಯಮ. ಹಾಗಾಗಿಯೇ, ಇವೆರಡೂ ಒಂದಕ್ಕೊಂದು ಪೂರಕ-ಪ್ರೇರಕ; ಒಂದು ಇನ್ನೊಂದಕ್ಕೆ ಸಾಮಾಗ್ರಿ.

**ಟಿಪ್ಪಣಿಗಳು :-**

೧) ಫಾಲಾಕ್ಷ, ಪ್ರಪಂಚದ ಇತಿಹಾಸ, ಪು ೨, (ಉದೃತ್ತ) ಡಾ. ಮೀನಾಕ್ಷಿ ಜಂಗಮನಿ, ಚಾರಿತ್ರಿಕ ಕಾದಂಬರಿ ಸಾಂಸ್ಕೃತಿಕ ಸಂಕಥನ, ರಚನ ಪ್ರಕಾಶನ ಮೈಸೂರು, ೨೦೧೦.

೨) ಅದೇ, ಪುಟ ೪

೩) ಅದೇ, ಪುಟ ೩

೪) ವೆಂಕಟರತ್ನ.ಎ.ವಿ., ಡಾ. ಎಂ.ಬಿ. ಪದ್ಮ, ಇತಿಹಾಸ ಸಂಶೋಧನಾ ಮಾರ್ಗ, ಪುಟ ೫೦೭

೫) ಅದೇ, ಪುಟ ೬೧೩

೬) Neelakanta Shastri. K.A, Presidential Address, Indian History Congress, Patna Session, 1946.

೭) ವೆಂಕಟರತ್ನ.ಎ.ವಿ., ಡಾ. ಎಂ.ಬಿ. ಪದ್ಮ, ಇತಿಹಾಸ ಸಂಶೋಧನಾ ಮಾರ್ಗ, ಪುಟ ೫೦೨

೮) ಅದೇ, ಪುಟ ೮೪

೯) ಚಿನ್ನಸ್ವಾಮಿ ಸೋಸಲೆ.ಎನ್, ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ಸಿ.ವಿ.ಜಿ. ಪಬ್ಲಿಕೇಷನ್ ಬೆಂಗಳೂರು – ೨೦೦೧, ಪುಟ ೨

೧೦) ಬಾಲಸುಬ್ರಮಣ್ಯಂ ಎಸ್. ಅರಿಸ್ಟಾಟಲ್‌ನ ಕಾವ್ಯಮೀಮಾಂಸೆ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೭೨, ಪುಟ ೨೯

೧೧) ಉಷಾದೇವಿ.ಸಿ.ಜಿ, ಕನ್ನಡದಲ್ಲಿ ಐತಿಹಾಸಿಕ ನಾಟಕಗಳು, ತಾರಾ ಪ್ರಿಂಟಿಂಗ್ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೩

೧೨) ಅದೇ

೧೩) ಚಿನ್ನಸ್ವಾಮಿ ಸೋಸಲೆ. ಎನ್, ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ಪುಟ ೪

೧೪) ಉಷಾದೇವಿ.ಸಿ.ಜಿ, ಕನ್ನಡದಲ್ಲಿ ಐತಿಹಾಸಿಕ ನಾಟಕಗಳು, ಪುಟ –೩೬

೧೫) ಅಮೂರ.ಜಿ.ಆರ್, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಶ್ರೀ ಹರಿ ಪ್ರಕಾಶನ, ಧಾರವಾಡ, ೧೯೯೪.

೧೬) ಮಾಸ್ತಿ ಸಾಹಿತ್ಯ ಸಮಗ್ರ ದರ್ಶನ, ೧೯೯೨, ಪುಟ ೫೩

೧೭) ನಿರಂಜನ ಅಭಿನಂದನ, ಕರ್ನಾಟಕ ಸಂಘ, ಪುತ್ತೂರು, ೧೯೮೬, ಪುಟ ೨೬೯

೧೮) ಅದೇ, ೨೭೦

೧೯) ಅದೇ ಪುಟ ೨೭೦

೨೦) ಶಿವರಾಮ ಪಡಿಕಲ್, ನಾಡು–ನುಡಿಯ ರೂಪಕ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ದ.ಕ. ೨೦೦೧, ಪುಟ ೪೫

೨೧) ಅಶೋಕ.ಟಿ.ಪಿ (ಲೇ) ಮಾಸ್ತಿ ಸಾಹಿತ್ಯ ಸಮಗ್ರ ದರ್ಶನ, ಸಂವಾದ ಪ್ರಕಾಶನ, ಮಲ್ಲಾಡಿ ಹಳ್ಳಿ, ೧೯೯೨, ಪುಟ ೫೨

೨೨) ಉಷಾದೇವಿ.ಸಿ.ಜಿ, ಕನ್ನಡದಲ್ಲಿ ಐತಿಹಾಸಿಕ ನಾಟಕಗಳು, ಪುಟ ೫೫೫

೨೩) ರಂಗನಾಥರಾವ್.ಜಿ.ಎಸ್.(ಲೇ), ಮಾಸ್ತಿ ಸಾಹಿತ್ಯ ಸಮಗ್ರ ದರ್ಶನ, ಪುಟ ೭೫

೨೪) ಬಾಲಸುಬ್ರಮಣ್ಯಂ ಎಸ್. ಅರಿಸ್ಟಾಟಲ್‌ನ ಕಾವ್ಯಮೀಮಾಂಸೆ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೭೨, ಪುಟ ೨೯

# ಅಧ್ಯಾಯ – ೩

## ಕಲ್ಯಾಣಸ್ವಾಮಿಯ ಕುರಿತಾದ ಲಿಖಿತ ಮತ್ತು ಮೌಖಿಕ ಚರಿತ್ರೆ

ಗತ ವಸ್ತು ಅಥವಾ ಘಟನೆಗಳು ವಾಸ್ತವಿಕತೆಯನ್ನು ವಿಶ್ಲೇಷಿಸಲು ಚರಿತ್ರೆ ಎನ್ನುವುದು ಆಕರವೂ, ಆಧಾರವೂ ಆಗಿರುತ್ತದೆ. ಸಾಮಾಜಿಕವಾಗಿ ಲಭ್ಯಗೊಳ್ಳುವ ಈ ಬಗೆಗಿನ ಆಕರ ಅಥವಾ ಆಧಾರಗಳಿಂದ ನಿಶ್ಚಿತ ಇತಿಹಾಸದ ಹಲವು ವಿಚಾರಗಳಿಗೆ ಚಲನಶೀಲವಾದ ರೂಪು ನೀಡಿ, ಆ ಸಂಚಲನೆಯಿಂದ ವಸ್ತು ಅಥವಾ ಘಟನೆಯ ನೈಜ ಸ್ಥಿತಿ–ಗತಿಗಳ ಅರಿವು ಸಾಧ್ಯವಾಗಿದೆ. ಈ ಆಧಾರಗಳು ಬೇರೆ ಬೇರೆ ಮೂಲಗಳಿಂದ ಲಭಿಸಿ ವೈವಿಧ್ಯಮಯವಾಗಿ ವಿನಿಯೋಗಗೊಳ್ಳಲು ಅವಕಾಶಗಳಿವೆ.

ಪ್ರಸ್ತುತ ಐತಿಹಾಸಿಕ ಮತ್ತು ಪ್ರಾದೇಶಿಕ ಮಹತ್ವವುಳ್ಳ ವಿಷಯಗಳಿಗೆ ಎರಡು ನೆಲೆಗಳ ಆಕರ–ಆಧಾರಗಳು ದೊರೆಯಬಹುದು.

೧. ಲಿಖಿತ ಆಧಾರಗಳು
೨. ಮೌಖಿಕ ಆಧಾರಗಳು

"ಸ್ವಾತಂತ್ರ್ಯಪೂರ್ವ ಕಾಲಘಟ್ಟದ ಭಾರತದ ಪರಿಕಲ್ಪನೆಗಳಲ್ಲಿ ರಾಷ್ಟ್ರ, ರಾಷ್ಟ್ರೀಯತೆ, ಭಾರತೀಯತೆ ಇವು ಕೆಲವು. ಇವಕ್ಕೆ ಆಧುನಿಕತೆ, ಅಭಿವೃದ್ಧಿಯಂತಹ ಹಲವು ಪರಿಕಲ್ಪನೆಗಳು ಸೇರ್ಪಡೆಗೊಂಡಿವೆ. ಈ ಪರಿಕಲ್ಪನೆಗಳಲ್ಲಿ ವಿಭಿನ್ನ ಸಾಂಸ್ಕೃತಿಕ ಅನನ್ಯತೆಗಳು ಅಂತರ್ಗತವಾಗಿವೆ. ವಿಶ್ವವನ್ನೇ ಒಂದು ಹಳ್ಳಿಯಾಗಿ ನಿರ್ವಹಿಸಿಕೊಳ್ಳುತ್ತಿರುವ ವರ್ತಮಾನದಲ್ಲಿ ಪ್ರತಿಯೊಬ್ಬರೂ ತಂತಮ್ಮ ನೆಲದ ಗಟ್ಟಿತನವನ್ನು, ವೈಶಿಷ್ಟ್ಯವನ್ನು ಮೊದಲು ಗುರುತಿಸಿಕೊಳ್ಳಬೇಕಾಗಿದೆ. ಮತ್ತು ಅವುಗಳ ಆಧಾರದಿಂದ ಜಗತ್ತಿನ ಸವಾಲುಗಳಿಗೆ ಮುಖಾಮುಖಿಯಾಗಬೇಕಾದುದು ಇಂದಿನ ಅಗತ್ಯವಾಗಿದೆ. ಹೀಗೆ ಹೊರಟ ಶೋಧದ ಪ್ರಯಾಣವು ಅನೇಕ ಹೊಸ ಸತ್ಯಗಳನ್ನು ಅನಾವರಣ ಮಾಡುವುದರಲ್ಲಿ ಸಂಶಯವಿಲ್ಲ. ಆ ಸತ್ಯಗಳು ನಮ್ಮ ನಾಳೆಗಳ ಹಾದಿಯ ಆಯ್ಕೆಗೆ, ಸುಗಮ ಪ್ರಯಾಣಕ್ಕೆ ಅನುವು ಮಾಡಬಲ್ಲದು". [೧]

ನಿರಂಜನರ ಕಾದಂಬರಿ 'ಕಲ್ಯಾಣಸ್ವಾಮಿ'ಯ ವಸ್ತು ಮತ್ತು ಪಾತ್ರಗಳು ಅವರೇ ತಿಳಿಸುವಂತೆ ರಾಷ್ಟ್ರೀಯ ವ್ಯಾಪ್ತಿ ಉಳ್ಳದ್ದು. ವಸಾಹತುಶಾಹಿ ಕಾಲದಲ್ಲಿ ರಾಷ್ಟ್ರೀಯ ಸಂಗ್ರಾಮದ ಒಂದು ಭಾಗವದು. ಘಟನೆಯ ಕ್ರಮಿಸುವಿಕೆ ಕೊಡಗು ಪ್ರಾಂತ್ಯದಿಂದ ತೊಡಗಿ ಕರ್ನಾಟಕದ ಗಡಿ ಪ್ರದೇಶವಾದ ಕುಂಬಳೆ ಸೀಮೆಯವರೆಗೆ ತನ್ನ ವ್ಯಾಪ್ತಿಯನ್ನು ಒಳಗೊಳ್ಳುತ್ತದೆ. ಸ್ವಾತಂತ್ರ್ಯ ಸಂಗ್ರಾಮ ಮತ್ತು ಆ ಕಾಲದ ರಾಜಕೀಯ ವ್ಯವಸ್ಥೆಯ ಏರು–ಇಳಿತಗಳಲ್ಲಿ ಈ ಕಾದಂಬರಿ ನಾಯಕನ ಪ್ರಮುಖ

ಪಾತ್ರವಿರುವುದರಿಂದ ಆ ಕಾಲದ ಲಿಖಿತ ದಾಖಲೆಗಳ ಪೈಕಿ ಕೆಲವಾರು ಈ ಕುರಿತಾಗಿ ಅಧ್ಯಯನಕ್ಕೆ ಆಕರವಾಗುತ್ತದೆ. ಕಲ್ಯಾಣಪ್ಪನ ಸಾಹಸಗಥೆಯನ್ನು ವಸ್ತುವಾಗುಳ್ಳ ಸಾಹಿತ್ಯ ಕೃತಿಗಳು ತೀರಾ ಕಡಿಮೆ. ಸರಕಾರಿ ದಾಖಲೆಗಳೂ ಕೆಲವಷ್ಟೇ ಲಭ್ಯ.

ಮೌಖಿಕವಾಗಿಯೂ ಅಷ್ಟೇ ನೂರೆಪ್ಪತ್ತು ವರ್ಷಗಳ ಹಿಂದೆ ಆಗಿ ಹೋದ ಕಲ್ಯಾಣಪ್ಪನ ಬಗೆಗೆ ನೋಡಿ ತಿಳಿದಿರುವ, ತಲೆಮಾರು ಈಗಾಗಲೇ ನಷ್ಟವಾಗಿದೆ. ಕೇಳಿ ತಿಳಿದಿರುವ ಅಳಿದುಳಿದಿರುವ ಬೆರಳೆಣಿಕೆಯ ವ್ಯಕ್ತಿಗಳಿಗಿರುವ ಸ್ಮೃತಿಶೂನ್ಯತೆ ಇಲ್ಲಿನ ಹೊಸನೋಟಗಳಿಗೆ ಬಹುದೊಡ್ಡ ತೊಡಕಾಗಿದೆ. [೨]

೧೯೫೭ರ ವೇಳೆಗೇ ನೂರಿಪ್ಪತ್ತು ವರ್ಷಗಳಷ್ಟು ಹಳೆಯದಾದ ಒಂದು ಪ್ರಮುಖ ರಾಷ್ಟ್ರೀಯ ಮಾನ್ಯತೆಯ ಘಟನಾವಳಿ ಮತ್ತು ಐತಿಹಾಸಿಕ ವ್ಯಕ್ತಿಯ ಕುರಿತಾದ ಸಮಗ್ರ ಮಾಹಿತಿಗಾಗಿ ಸ್ವತಃ ನಿರಂಜನರೇ ಕಷ್ಟಾಸಾಧ್ಯವಾಗಿ ಪ್ರಯತ್ನಿಸುವಂತಾಗಿರುವುದು ಕಾದಂಬರಿಯಲ್ಲಿ ಉಲ್ಲೇಖಿತ ಅವರ ಮಾತುಗಳಿಂದಲೇ ತಿಳಿದು ಬರುತ್ತದೆ.

“ಅದನ್ನು (ಕಲ್ಯಾಣಸ್ವಾಮಿ ಕಾದಂಬರಿ) ಬರೆಯಲು ಹೊರಟಾಗ ನಾನು ಇದಿರಿಸಬೇಕಾಗಿದ್ದ ಎಡರು–ತೊಡರುಗಳ ಪೂರ್ಣ ಕಲ್ಪನೆ ನನಗೆ ಇರಲೇ ಇಲ್ಲ. ನನಗಿದ್ದ ತಿಳುವಳಿಕೆಯ ಆಧಾರದ ಮೇಲೆಯೇ ವಿಷಯ ಸಂಗ್ರಹಕ್ಕೆಂದು ಕೈ ಹಾಕಿದಾಗ, ಇದು ಪುಷ್ಪೋದ್ಯಾನದ ವಿಹಾರವಲ್ಲ ಎಂಬುದು ಮನವರಿಕೆಯಾಯಿತು.” [೩]

ನಿರಂಜನರಿಗೆ ಪ್ರಧಾನವಾಗಿರುವುದು ಆತನ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಅಸ್ಥಿತ್ವದ ಪ್ರಶ್ನೆಯಾಗಿದೆ. ಪ್ರಸ್ತುತ ಅಧ್ಯಯನವು ಆಕರವಾಗಿಟ್ಟುಕೊಂಡಿರುವ ಮೌಖಿಕ ಹಾಗೂ ಲಿಖಿತ ಚರಿತ್ರೆಗಳೆಲ್ಲವೂ ಕಲ್ಯಾಣಸ್ವಾಮಿಯನ್ನು ಎರಡು ನೆಲೆಗಳಲ್ಲಿ ಗುರುತಿಸುತ್ತದೆ. ಈ ಎರಡೂ ಗುರುತಿಸುವಿಕೆಗೂ ಆಯಾ, ಆಧಾರಗಳಲ್ಲಿ ದಾಖಲಾದ ಆತನ ‘ವ್ಯಕ್ತಿತ್ವ ರೂಪಣೆ’ಯ ಮಾದರಿಯೇ ಅಡಿಪಾಯವಾಗಿದೆ.

ಭಾರತವನ್ನು ಹಿಂಡಿ ಹಿಪ್ಪೆ ಮಾಡಿದ ವಿದೇಶಿಯ ಸುಲಿಗೆಗಾರರ ಪ್ರಕಾರ ಕಲ್ಯಾಣ ಸ್ವಾಮಿ ಒಬ್ಬ ದರೋಡೆಗಾರ, ಸ್ವಾರ್ಥ ಸಾಧಕ, ಕಪಟಿ, ಅವರು ಬರೆದಿರುವ ಇತಿಹಾಸದಿಂದ ಪ್ರಭಾವಿತರಾದ ಇನ್ನು ಕೆಲವರ ಅಭಿಪ್ರಾಯದಂತೆ ಆತನೊಬ್ಬ ‘ಹುಲುಮಾನವ’, ‘ನಾಲ್ಕಾರು ಜನ ಸರದಾರರ ಕೈಗೊಂಬೆ....’ [೪]

ನಿರಂಜನರು ತಮ್ಮ ಕಾದಂಬರಿಯಲ್ಲೇ ಕಲ್ಯಾಣಸ್ವಾಮಿಗೆ ಈ ಬಗೆಗಿನ ಭಿನ್ನ ವ್ಯಕ್ತಿತ್ವಕಲ್ಪನೆವಿರುವುದನ್ನು ಗುರುತಿಸಿದ್ದಾರೆ. ಇವಲ್ಲದೆ, ಕಲ್ಯಾಣಸ್ವಾಮಿಯೊಬ್ಬ ಪ್ರಭಾವಿ

ದಂಡನಾಯಕ, ಸ್ವಾತಂತ್ರ್ಯ ಹೋರಾಟಗಾರ, ಅಪ್ರತಿಮ ಸಾಹಸಿ ಎಂಬ ಪ್ರಾಂಜಲ ಕಾಣ್ಕೆಯೂ ಇದೆ.

ಕಲ್ಯಾಣಸ್ವಾಮಿಯ ಕುರಿತಾದ ಸ್ಥಳೀಯ ಚರಿತ್ರೆಯನ್ನು ಸಂರಚಿಸುವ ವೇಳೆಗೆ ಆತನ ವ್ಯಕ್ತಿತ್ವದ ಉಗಮ ಮತ್ತು ಸಾಧನಾ ಜೀವನ ಪ್ರಸರಣವನ್ನು ಕೊಡಗು ಪ್ರಾಂತ್ಯದಿಂದ ಆರಂಭಿಸಬಹುದು ಕೊಡಗಿನಿಂದ ತೊಡಗಿ ಕರ್ನಾಟಕದ ಗಡಿ ಪ್ರದೇಶವಾದ ಕುಂಬಳೆ ಸೀಮೆಯವರೆಗೆ ಈ ತನಕ ನಡೆದಿರುವ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಪ್ರಧಾನವಾಗಿಟ್ಟುಕೊಂಡು ಕಲ್ಯಾಣಪ್ಪ ಕೇಂದ್ರಿತ ಚರಿತ್ರೆ ನಿರ್ಮಾಣ ಸಾಧ್ಯ.

'ಚರಿತ್ರೆ' ಎನ್ನುವುದಕ್ಕೆ ಆಯಾ ಪ್ರದೇಶದ ಸಾಂಸ್ಕೃತಿಕ ಪ್ರಕ್ರಿಯೆಗಳೂ ಆಧಾರವಾಗಿರುತ್ತದೆ. ಹಾಗಾಗಿ ಕಲ್ಯಾಣಸ್ವಾಮಿಯ ಚರಿತ್ರೆಯನ್ನು ಸಂಶೋಧಿಸಿ, ಅವಲೋಕಿಸುವ ಸಂದರ್ಭದಲ್ಲಿ ಆತನ ಅಸ್ಥಿತ್ವವನ್ನು ಗುರುತಿಸಬಹುದಾದ ಕೊಡಗು ಮತ್ತು ಉತ್ತರ-ದಕ್ಷಿಣ ಕನ್ನಡ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸದ ಕೆಲವಾರು ಮಗ್ಗುಲುಗಳನ್ನು ಅಧ್ಯಯನ ನಡೆಸುವುದು ಮುಖ್ಯವಾಗುತ್ತದೆ.

ಕಲ್ಯಾಣಸ್ವಾಮಿಯ ಉಗಮ ಮತ್ತು ಜೀವನಗಾಥೆಯ ಬಹುತೇಕ ಭಾಗ ಕೊಡಗು ಪ್ರಾಂತ್ಯದಲ್ಲೇ ನಡೆದಿರುವುದರಿಂದ ಕೊಡಗಿನ ಸಾಂಸ್ಕೃತಿಕ ಪಲ್ಲಟಗಳನ್ನು ವಿವೇಚಿಸುವುದು ಅಪೇಕ್ಷಣೀಯ.

ರಿಕ್ತರನು ತನ್ನ ಗೆಜೆಟಿಯರ್‌ನ ಪುಟ ೨೩೧ ಮತ್ತು ೨೩೨ರಲ್ಲಿ ಕೊಡಗಿನ ಸಾಂಸ್ಕೃತಿಕ ಇತಿಹಾಸದ ಬಗ್ಗೆ ಹೀಗೆ ಹೇಳಿದ್ದಾನೆ.

"ಕೊಡಗಿನ ಪ್ರಸಿದ್ಧಿ ಅಡಗಿರುವುದು ಖಂಡಿತವಾಗಿಯೂ ಅವರ ವಂಶಾವಳಿಯ ಶುದ್ಧತೆ ಮತ್ತು ಪ್ರಾಚೀನತೆಯಿಂದಾಗಿ ಅಲ್ಲ. – ಆದರೆ ಅನೇಕ ವಿರೋಧಾಭಾವಗಳುಳ್ಳ ಮೂಲಗಳು ಸಮ್ಮಿಳಿತಗೊಂಡಂತಹ ಒಂದು ಒಡಂಬಡಿಕೆಯುಳ್ಳ ಪ್ರಬಲ ಸಮುದಾಯ ಅಥವಾ ಕುಲವೆಂಬ ಕಾರಣದಿಂದಾಗಿದೆ. ಅವರ ಮುಂದಾಳು-ಇಲ್ಲಿಯವರೇ ಆದ 'ನಾಯಕರು' ಆಗಿರಬಹುದು ಅಥವಾ ಪರಕೀಯರಾದ ರಾಜರೇ ಆಗಿರಬಹುದು-ಇಲ್ಲವೇ ಇಂಗ್ಲಿಷ್ ಆಡಳಿತಗಾರರೇ ಆಗಿರಬಹುದು. ಇವರ ದತ್ತು ಸ್ವೀಕರಿಸಿದ ಜನ್ಮಭೂಮಿಗೆ ಆಪತ್ತು ಬಂದ ಯಾವುದೇ ಸಂದರ್ಭದಲ್ಲಿ- ಸ್ವಾಮಿ ಭಕ್ತಿಯಿಂದ ಸುತ್ತುವರಿದು ಮೇಳೈಸಿ ಇದರ ಗೌರವ ಮತ್ತು ರಕ್ಷಣೆಗಾಗಿ ಧೈರ್ಯವಾಗಿ ಇವರು ಹೋರಾಡುವುದರಲ್ಲಿ ಯಾವುದೇ ಸಂಶಯವಿಲ್ಲ." [೫]

ಈ ದಾಖಲೆಯು ಕೊಡವ ಪೀರರಗಿರುವ 'ಸ್ವಾಮಿ ನಿಷ್ಠೆ'ಯ ಕುರಿತಾಗಿ ಸ್ಪಷ್ಟತೆಯನ್ನು ಒದಗಿಸುತ್ತದೆ. ಈ ಸ್ಪಷ್ಟತೆಯ ಆಧಾರದಲ್ಲಿ ಕಲ್ಯಾಣಪ್ಪನ ಸಾಹಸಗಳನ್ನು ವಿವೇಚಿಸಬಹುದು.

"ದೇಶದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ೧೮೫೭ರ ದಂಗೆಯನ್ನು ಕರೆಯುತ್ತಾರಾದರೂ, ಅದಕ್ಕಿಂತಲೂ ಮೊದಲೇ ಅಂದರೆ ೧೮೩೭ರಲ್ಲೇ ದಕ್ಷಿಣ ಕನ್ನಡ ಹಾಗೂ ಕೊಡಗು ಜಿಲ್ಲೆಗಳ ಅನೇಕರು ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ಸಂಘಟಿತರಾಗಿ ಹೋರಾಟ ನಡೆಸಿ, ಹುತಾತ್ಮರಾದ ಸಂಗತಿಗಳು ಚರಿತ್ರೆಯಲ್ಲಿ ಅಡಗಿದೆ. ಈ ಭಾಗದ ಭೌಗೋಳಿಕ ಸಂಕಷ್ಟಗಳು, ಆರ್ಥಿಕ ಅಡಚಣೆಗಳು, ವಿದ್ಯೆಯ ಕೊರತೆ, ಸಂಪರ್ಕದ ಅಸಾಧ್ಯತೆಯ ನಡುವೆಯೂ ಪರಸ್ಪರ ವಿಚಾರ ವಿನಿಮಯ ನಡೆದು, ಸಂಘಟಿತರಾಗಿ ಪರಕೀಯರ ಆಡಳಿತವನ್ನು ಧಿಕ್ಕರಿಸುವ ಧೈರ್ಯ ಮಾಡುವುದರ ಮೂಲಕ ಸ್ವತಂತ್ರ ಬದುಕಿನ ಆಶಾ ಜ್ಯೋತಿಯೊಂದನ್ನು ದಕ್ಷಿಣ ಕನ್ನಡ ಹಾಗೂ ಕೊಡಗಿನಲ್ಲಿ ಬೆಳಗಿಸಿದ ಅಂದಿನ ಘಟನೆಗಳು ಇಂದಿನವರಿಗೆ ಪ್ರೇರಕ ಸಂಗತಿಯಾಗಿದೆ." [೬]

ಇಲ್ಲಿನ ಹೋರಾಟದ ಸಂದರ್ಭದಲ್ಲಿ ಪ್ರಸ್ತುತ ಕಲ್ಯಾಣಪ್ಪ, ಸ್ವಾಮಿ ಅಪರಂಪಾರ ಮೊದಲಾದನೇಕರ ಹೆಜ್ಜೆ ಗುರುತುಗಳನ್ನು ಕಾಣಬಹುದು.

"ಇತಿಹಾಸದಲ್ಲಿ ಅದೆಷ್ಟೋ ಯುದ್ಧಗಳು ಹೋರಾಟಗಳು ನಡೆದಿವೆ. ಅಮರ ಸುಳ್ಯದಲ್ಲಿ ರಣಕಹಳೆ ಊದಿದ ೧೮೩೭ರ ಕೊಡಗಿನ ಸ್ವಾತಂತ್ರ್ಯ ಹೋರಾಟ ಒಂದು ಐತಿಹಾಸಿಕ ಸತ್ಯ. ಕ್ರಾಂತಿಯ ಮುಂದಾಳತ್ವ ಗುಡ್ಡೆಮನೆ ಅಪ್ಪಯ್ಯ ಗೌಡರು ವಹಿಸಿದ್ದರೂ ಕೂಡಾ ಕೊಡಗಿನ ಬಹುಜನ ಭಾಗವಹಿಸಿದ್ದಾರೆ. ಬ್ರಿಟಿಷರ ವಿರುದ್ಧ ಹೋರಾಡಿ ಸತ್ತವರಲ್ಲಿ ನನ್ನ ಕುಟುಂಬದ 'ಮರದಯ್ಯ'ನೆಂಬವನೂ ಒಬ್ಬನೆನ್ನಲು ನನಗೆ ಹೆಮ್ಮೆ!" ಎಂಬುದಾಗಿ ಬಾಚರಣೆಯಂಡ ಅಪ್ಪಣ್ಣ ತಿಳಿಸುತ್ತಾರೆ. [೭]

ಪ್ರಸ್ತುತ ಹೇಳಿಕೆಯಿಂದಾಗಿ ೧೮೩೭ರ ಕ್ರಾಂತಿಯಲ್ಲಿ ಪಾಲ್ಗೊಂಡ ದೊಡ್ಡ ವೀರ ಬಳಗದ ನಾಯಕ ಮತ್ತು ಸದಸ್ಯ ಕ್ರಾಂತಿಕಾರಿಯೊಬ್ಬನ ಉಲ್ಲೇಖ ನಮಗೆ ಲಭಿಸುತ್ತದೆ.

ಈ ಹೇಳಿಕೆಯ ಮುಂದಿನ ಪರಿಚ್ಛೇದದಲ್ಲಿ "ಕೊನೆಗೆ ಗುಡ್ಡೆಮನೆ ಅಪ್ಪಯ್ಯ ಗೌಡರನ್ನು ಮಡಿಕೇರಿಯಲ್ಲಿ ನೇಣುಗಂಬಕ್ಕೆ ಏರಿಸಿದುದು ಐತಿಹಾಸಿಕ ಸತ್ಯ. ಆ ನಾಯಕ ಹುತಾತ್ಮನಾದದ್ದು ಸತ್ಯ." [೮]

ಕಲ್ಯಾಣಪ್ಪನೂ ಇದೇ ಕ್ರಾಂತಿಕಾರಿ ಬಳಗದ ಸದಸ್ಯನಾಗಿರಬಹುದು.

೧೯ನೇ ಶತಮಾನ ಎಂಬುದು ಒಂದು ಬದಲಾವಣೆಯ ಪರ್ವಕಾಲ. ದೇಶದ ಎಲ್ಲಾ ರಂಗಗಳಲ್ಲೂ ವಸಾಹತುಶಾಹಿಯ ಆಗಮನದಿಂದಾಗಿ ಹೊಸ ಪರಿವರ್ತನೆಯ ಅಲೆ ಎದ್ದಿರುವ ಕಾಲ ಇದೆನ್ನಬಹುದು. "ಕೊಡಗಿನ ಉತ್ತರ ಭಾಗ, ದಕ್ಷಿಣೋತ್ತರ ಕನ್ನಡ ಜಿಲ್ಲೆಗಳು, ಮೈಸೂರಿನ ಪಶ್ಚಿಮ ಭಾಗ ಕ್ರಿ.ಶ. ಎರಡನೇ ಶತಮಾನದಿಂದ ಏಳನೇ ಶತಮಾನದ ವರೆಗೆ ಬನವಾಸಿ ಕದಂಬರ ಅಧೀನದಲ್ಲಿತ್ತು. ಹಂಗಳದ ಕದಂಬರ ಉತ್ತರಾಧಿಕಾರಿಗಳಾಗಿ ಕುಂಬಳೆ ಅರಸರು ರಾಜ್ಯವನ್ನು ಕಟ್ಟಿಕೊಂಡಾಗ ಅವರ ರಾಜ್ಯವು ಪೂರ್ವದಲ್ಲಿ ಪಶ್ಚಿಮ ಘಟ್ಟದ ವರೆಗೂ ಹಬ್ಬಿತ್ತು. ಇದರಿಂದ ಕೊಡಗಿನ ಭಾಗವು (ಘಟ್ಟದ ಕೆಳಗಿನ ಭಾಗ) ಕುಂಬಳೆ ಅರಸರ ಕಾಲದಿಂದಲೂ ತುಳುನಾಡಿನ ಭಾಗವಾಗಿತ್ತೆಂಬುದು ಸ್ಪಷ್ಟವಾಗುತ್ತದೆ." [೯]

ಕಲ್ಯಾಣ ಸ್ವಾಮಿ ಮತ್ತು ಅವನ ಬಳಗದ 'ಕ್ರಾಂತಿ'ಯ ವ್ಯಾಪ್ತಿ ಇರುವುದು ಹೆಚ್ಚಾಗಿ ಈ ಭಾಗದಲ್ಲಿಯೇ. ಹಾಗಾಗಿಯೇ ತುಳುನಾಡಿನ ಭಾಗವಾಗಿದ್ದ ಘಟ್ಟದ ಕೆಳಗಿನ ಭಾಗದಿಂದ ತೊಡಗಿ, ಅದೇ ಭಾಗದ ನಂತರದ ಪ್ರದೇಶವಾದ ದಕ್ಷಿಣೋತ್ತರ ಜಿಲ್ಲೆಗಳಲ್ಲಿ ಆತನ ಹೋರಾಟಗಳು ವಿಸ್ತರಿಸುತ್ತಾ ಹೋಗುತ್ತದೆ ಎನ್ನುವುದು ಸ್ಪಷ್ಟ. ಕೊಡಗಿಗೂ ಮತ್ತು ಈ ಜಿಲ್ಲೆಗಳಿಗೂ ಸಂಬಂಧ ಏರ್ಪಡುವುದು ಈ ಕಾರಣದಿಂದಲೇ ಈಗ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೆಂಬುದಾಗಿ ವಿಭಜನೆಗೊಂಡಿರುವ ಜೋಡು ಜಿಲ್ಲೆಗಳನ್ನು ಹಿಂದೆ 'ಕನ್ನಡ ಜಿಲ್ಲೆ' ಎಂಬ ಒಂದೇ ಹೆಸರಿನಲ್ಲಿ ಕರೆಯಲಾಗುತ್ತಿತ್ತು ಎಂಬುದು ಪ್ರಾಚೀನ ಗ್ರಂಥ ಮತ್ತು ಉಲ್ಲೇಖಗಳಲ್ಲಿ ಕಾಣಬಹುದಾಗಿದೆ.

"ಲಿಂಗರಾಜೇಂದ್ರ ನಂತರ ಚಿಕ್ಕರಾಜೇಂದ್ರನು ಪಟ್ಟಕ್ಕೆ ಬಂದು ಕೊಡಗನ್ನು ಕ್ರಿ.ಶ. ೧೮೨೦ ರಿಂದ ೧೮೩೪ರ ವರೆಗೆ ಆಳಿದ ತಲಚೇರಿಯಲ್ಲಿ ಇತರ ಅರಸುಗಳಂತೆ ಬ್ರಿಟಿಷ್ ರೆಸಿಡೆಂಡನಲ್ಲಿ ಆಶ್ರಯ ಪಡೆಯುತ್ತಿದ್ದ ಇವನು ಬ್ರಿಟಿಷರಿಗೆ ಅವಿರೋಧವಾಗಿ ವರ್ತಿಸುತ್ತಿದುದರಿಂದ ಗವರ್ನರ್ ಜನರಲ್ ವಿಲಿಯಂ ಬೆಂಟಿಂಕನ ಆಜ್ಞೆಯಂತೆ, ಕಂಪೆನಿ ಸರಕಾರದ ಸೈನ್ಯದ ಅಧಿಕಾರಿ ಜನರಲ್ ಫ್ರೆಜರನು ಕ್ರಿ.ಶ. ೧೮೩೪ರಲ್ಲಿ ಕೊಡಗನ್ನು ಮುತ್ತಿಗೆ ಹಾಕಿ, ಚಿಕ್ಕವೀರ ರಾಜೇಂದ್ರನ ಆಡಳಿತೆಯನ್ನು ಕೊನೆಗೊಳಿಸಿ ಕಂಪೆನಿ ಸರಕಾರದ ಆಳ್ವಿಕೆಯನ್ನು ಪ್ರಾರಂಭಿಸಿದನು."[೧೦]

ಇದಾಗಿ, ಕೇವಲ ಮೂರು ವರ್ಷಗಳಲ್ಲಿ ಅಂದರೆ ೧೮೩೭ರಲ್ಲಿ ಕಲ್ಯಾಣಪ್ಪನ ಸಾಹಸಗಾಥೆ ಆರಂಭವಾಗಿರುವುದನ್ನು ಕಾಣಬಹುದು.

ಚಿಕ್ಕವೀರ ರಾಜೇಂದ್ರನ ಸೈನ್ಯದಲ್ಲಿ ಕಲ್ಯಾಣಪ್ಪ ದಳಪತಿಯಾಗಿದ್ದನೆಂಬ ಅಭಿಪ್ರಾಯ ಇಲ್ಲಿ ಗಮನಾರ್ಹ. ನಿರಂಜನರ ಕಾದಂಬರಿಯ ಕಥೆ ಮತ್ತು

ಉಲ್ಲೇಖಿಗಳಲ್ಲೂ ಅವರಿದನ್ನು ಸಮರ್ಥಿಸಿಕೊಂಡಿದ್ದಾರೆ. ಕಂಪೆನಿ ಆಡಳಿತದವರೆಗೆ ಚಿಕ್ಕ ವೀರ ರಾಜೇಂದ್ರನ ಅಧೀನದಲ್ಲಿದ್ದ ಕಲ್ಯಾಣಪ್ಪ, ಅವನ ಆಡಳಿತ ಪಲ್ಲಟಗೊಂಡಾಗ, ೧೮೩೭ರ ಸಂದರ್ಭಕ್ಕಾಗುವಾಗ ಕ್ರಾಂತಿಯನ್ನು ಸ್ವತಂತ್ರನಾಗಿ ಕೈಗೊಂಡು, ಮುನ್ನಡೆಸಿದನೆಂಬುದು ತಿಳಿಯಬಹುದು.

**ಕಲ್ಯಾಣಸ್ವಾಮಿಯ ಬಂಡಾಯದ ಹಿನ್ನಲೆ ಮತ್ತು ಕಾರಣಗಳು :**

ದಕ್ಷಿಣ ಕನ್ನಡ ಜಿಲ್ಲೆಯು ಕ್ರಿ.ಶ. ೧೭೯೯ರಲ್ಲಿ ವಸಾಹತುಶಾಹಿ ಆಡಳಿತಕ್ಕೆ ಒಳಪಟ್ಟಿತು. ಇದಾಗಿ ೩೫ ವರ್ಷಗಳ ಬಳಿಕವಷ್ಟೆ ಈಸ್ಟ್ ಇಂಡಿಯಾ ಕಂಪೆನಿಯು ಕೊಡಗನ್ನು ವಶಪಡಿಸಿಕೊಂಡಿತು. ಸ್ಥಳೀಯ ಅರಸನನ್ನು ಪದಚ್ಯುತಿಗೊಳಿಸಿ, ಸುಳ್ಯ-ಪುತ್ತೂರು ಮಾಗಣೆಗಳ ನೂರ ಹತ್ತು ಗ್ರಾಮಗಳಲ್ಲಿ ತಂದ ಕಂದಾಯ ವ್ಯವಸ್ಥೆ ಅಲ್ಲಿನ ಜನರಿಗೆ ಅಸಮಾಧಾನ ಮೂಡಲು ಪ್ರಧಾನ ಕಾರಣವಾಯಿತು. ಈ ಕಂದಾಯ ನೀತಿ ಜನ ಸಾಮಾನ್ಯರಿಗೆ ಅವರಲ್ಲೂ ರೈತಾಪಿ ವರ್ಗಕ್ಕೆ ಶೋಷಣಾತ್ಮಕವಾಗಿ ಪರಿಣಮಿಸಿದ್ದರಿಂದ ವಸಾಹತುಶಾಹಿಗಳ ವಿರುದ್ಧ ಬಂಡಾಯವೆದ್ದಿತು.

ದೇಶೀ ಸಂಸ್ಕೃತಿ ನಾಶದ ಭೀತಿ, ಸುಳ್ಯ ಸೀಮೆಯ ಕೂಜುಗೂಡು ಮತ್ತು ಕೆದಂಬಾಡಿ ಮನೆತನಗಳು ಮಾತ್ರವಲ್ಲದೆ, ಅನೇಕ ಗೌಡಮನೆತನಗಳಿಗೆ, ಬ್ರಾಹ್ಮಣ ಕುಟುಂಬಗಳಿಗೆ ರಾಜ ಆಸ್ಥಾನದ ಹುದ್ದೆ-ಗೌರವಗಳು ನಷ್ಟವಾದ ಆತಂಕ ಇವು ಬಂಡಾಯಕ್ಕೆ ರಾಜಕೀಯ ಹಿನ್ನಲೆಯನ್ನು ನೀಡಿತು.

ದಕ್ಷಿಣ ಕನ್ನಡದಲ್ಲಿ ಈ ಕ್ರಾಂತಿ ಕ್ರಿ.ಶ. ೧೭೯೯ರಿಂದ ಪ್ರಾರಂಭಗೊಂಡರೆ, ಕ್ರಿ.ಶ. ೧೮೩೪ರಲ್ಲಿ ಕೊಡಗಿನಲ್ಲೂ ವ್ಯಾಪಿಸತೊಡಗಿತು.

'ದಕ್ಷಿಣ ಕನ್ನಡದ ಪ್ರಮುಖ ಬೆಳೆ ಭತ್ತಕ್ಕೆ ವಿದೇಶಗಳಲ್ಲಿ ಅಪಾರ ಬೇಡಿಕೆ ಇದ್ದುದರಿಂದ ಕ್ರಿ.ಶ. ೪ನೇ ಶತಮಾನದಲ್ಲೇ ವಿದೇಶಿ ವರ್ತಕರ ಕಣ್ಣು ಈ ಪ್ರದೇಶದ ಮೇಲೆ ಬಿದ್ದಿತು" [೧೧] ಆಗ ಸ್ಥಳೀಯ ಅರಸರ ಪ್ರಾಬಲ್ಯವಿರಲಿಲ್ಲ. ಪ್ರತಿರೋಧ ಕಂಡುಬಂದಿದ್ದರೆ ಅದು ರಾಣೀ ಅಬ್ಬಕ್ಕಳಿಂದ ಮಾತ್ರ. ಈ ಸಂದರ್ಭದಲ್ಲಿ ಈಸ್ಟ್ ಇಂಡಿಯಾ ಕಂಪೆನಿ ಜಾರಿಗೆ ತಂದ ಕಂದಾಯ ನೀತಿಯು ಅವೈಜ್ಞಾನಿಕವಾಗಿದ್ದು, ಜನ ಸಾಮಾನ್ಯರ ವಿರೋಧಕ್ಕೆ ಕಾರಣವಾಗುತ್ತದೆ. ಕ್ರಿ.ಶ. ೧೮೨೦ರ ವೇಳೆಗೆ ಕಂದಾಯ ಬೆಲೆ ಸ್ಥಿರವಾಗಿದ್ದು, ಭತ್ತದ ಮಾರುಕಟ್ಟೆ ಬೆಲೆ ಕಡಿಮೆಯಾಯಿತು. ಇದರ ಪರಿಣಾಮವಾಗಿ ಅವರ ಸ್ವಸ್ಥ ಜೀವನಕ್ಕೆ ಧಕ್ಕೆಯಾಗಿ ಅವಶ್ಯ ಸಾಮಾಗ್ರಿ ಸಂಗ್ರಹ ಕಷ್ಟಾಸಾಧ್ಯವಾಯಿತು. ಕೃಷಿ ನಷ್ಟ ಸಮಯದಲ್ಲೂ ತೆರಿಗೆ ರಿಯಾಯತಿಗಳು ದೊರೆಯುತ್ತಿರಲಿಲ್ಲ. ಫಸಲಿನ ಬದಲು ಭೂಮಿಯ ಗಾತ್ರವನ್ನು ಆಧರಿಸಿ ಕಂದಾಯ ನಿರ್ಣಯ ಮಾಡಲಾಗುತ್ತಿತ್ತು. ಬಡರೈತರು ಕರಕಟ್ಟಲು ಅಸಾಧ್ಯವಾದ ಸಂದರ್ಭದಲ್ಲಿ

ಶೇ. ೧೨ರ ಬಡ್ಡಿಗೆ ಭೋಗ್ಯಕ್ಕೆ ನೀಡಲನುವಾದಾಗ, ಜೈನ, ಬಂಟ, ಬ್ರಾಹ್ಮಣ, ಕೊಂಕಣಿಗರು ಈ ಭೂಮಿಯನ್ನು ಕೊಂಡುಕೊಳ್ಳುತ್ತಿದ್ದರು. ಸಾಲ ಮರುಪಾವತಿ ಮಾಡಲಾಗದ ರೈತರ ಭೂಮಿ ಸಾಲ ನೀಡಿದವರಿಗೆ ಮಾರಾಟವಾಗುತ್ತಿತ್ತು. ಸರಕಾರವೇ ಇಂಥವರಿಗೆ ಭೂಮಿಯನ್ನು ಹರಾಜು ಹಾಕುತ್ತಿತ್ತು.

ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಸಾರ್ವಜನಿಕ ಆದಾಯದಲ್ಲಿ ಸುಮಾರು ಶೇ. ೭೦ರಷ್ಟು ಭೂಕಂದಾಯ ಒಂದರಿಂದಲೇ ಸಂಗ್ರಹಿಸಬೇಕಾಗಿದ್ದ ಕಾರಣ 'ತೆರಾವೋ' ಎಂಬ ಹೆಸರಿನಲ್ಲಿ ಹೆಚ್ಚೆಚ್ಚು ತೆರಿಗೆ ನಿಗದೀಕರಿಸುವುದು ಕಂಪೆನಿ ಸರಕಾರಕ್ಕೆ ಅನಿವಾರ್ಯವಾಗಿತ್ತು.' [೧೨]

ದಕ್ಷಿಣ ಕನ್ನಡದ ಬಹುತೇಕ ಪ್ರದೇಶಗಳನ್ನು ವಶಪಡಿಸಿಕೊಂಡ ಮೇಲೆ ಅಲ್ಲಿಯ ಸ್ಥಳೀಯ ರಾಜ ನಾಯಕರುಗಳನ್ನು ಅಧಿಕಾರದಿಂದ ತೆಗೆದುಹಾಕಿ ಈಸ್ಟ್ ಇಂಡಿಯಾ ಕಂಪೆನಿ ತನ್ನ ಅಧಿಕಾರವನ್ನು ಸ್ಥಾಪಿಸಿತು. ಇದಲ್ಲದೆ, ಸ್ಥಳೀಯ ನಾಯಕರು ಅನೇಕ ವೇಳೆ ಕಂಪೆನಿಯ ಪರವಾಗಿಯೇ ಕಾರ್ಯನಿರ್ವಹಿಸುತ್ತಿದ್ದರು. ಅರಸರನ್ನು ಜಮೀನ್ದಾರರ ಮಟ್ಟ ಇಳಿಸಿದ ಕಂಪೆನಿಗೆ ಅವರಿಗೆ ಮಾಸಾಶನ ನೀಡುವುದು ಹೊರೆ ಎಂದೆನಿಸಿದಾಗ 'ಕಂದಾಯ ಹೆಚ್ಚಳ'ದ ಮೂಲಕ ಅದಕ್ಕೆ ಪರಿಹಾರ ಕಾಣಬೇಕಾಯಿತು.

ಫ್ರಾನ್ಟ್ಜ್ ಫ್ಯಾನನ್‌ನ ಪ್ರಕಾರ ವಸಾಹತುಶಾಹಿ ದೇಶಗಳಲ್ಲಿ ರೈತರು ಮಾತ್ರ ಬಂಡಾಯಗಾರರಾಗಿರುತ್ತಾರೆ. ಏಕೆಂದರೆ ಅವರು ಪಡೆಯುವುದನ್ನು ಬಿಟ್ಟರೆ ಕಳೆದುಕೊಳ್ಳುವುದೇನೂ ಇರುವುದಿಲ್ಲ. ವರ್ಗ ವ್ಯವಸ್ಥೆಯ ಹೊರಗಿರುವ ರೈತ ಮೊದಲು ಶೋಷಣೆಗೆ ಒಳಗಾಗುತ್ತಾನೆ ಮತ್ತು ಹಿಂಸೆಯಿಂದ ಮಾತ್ರ ಅದನ್ನು ನಿವಾರಿಸಬಹುದು ಎಂದುಕೊಳ್ಳುತ್ತಾನೆ. ಅವನಲ್ಲಿ ರಾಜ ಇರುವುದಿಲ್ಲ. ಒಪ್ಪಂದಕ್ಕೆ ಅವನು ಬರುವ ಸಾಧ್ಯತೆ ಇಲ್ಲ. [೧೩]

ಅಸಮರ್ಪಕ ಭೂಕಂದಾಯ, ಉಪ್ಪು, ಹೊಗೆಸೊಪ್ಪು ಏಕಸ್ವಾಮ್ಯ, ಹೊಸ ನ್ಯಾಯಾಂಗ ವ್ಯವಸ್ಥೆ, ಆರ್ಥಿಕ ಹಿಂಜರಿತ ಈ ಎಲ್ಲಾ ಪ್ರಬಲ ಕಾರಣಗಳಿಂದ ಕೊಡಗು–ದಕ್ಷಿಣ ಕನ್ನಡ ಜಿಲ್ಲೆಗಳ ರೈತ ಬಳಗದ ಸಹನೆ ತಪ್ಪುವಂತಾಯಿತು. ಬ್ರಿಟಿಷ್ ಅಧಿಕಾರಿಗಳ ಬಹುಮುಖ ಮೋಸಗಳ ಅರಿವಾಗಿ ರೈತರು ಒಗ್ಗೂಡ ತೊಡಗಿದರು. ಇದು ೧೮೩೧ರ 'ಕೂಟುದಂಗೆ'ಗೆ ಕಾರಣವಾಯಿತು.

"೧೮೩೧ರ ಜನವರಿ ತಿಂಗಳ ಮೊದಲ ವಾರದಲ್ಲಿ ಬೇಕಲದಲ್ಲಿ ಆರಂಭವಾದ 'ಕೂಟುದಂಗೆ' ಶೀಘ್ರದಲ್ಲಿ ಕುಂದಾಪುರದವರೆಗೆ ವಿಸ್ತರಿಸಿತು. ಬಾರ್ಕೂರು, ಬಂಟವಾಳ, ಬ್ರಹ್ಮಾವರ, ಮಧೂರು, ಮಂಜೇಶ್ವರ, ಮೂಲ್ಕಿ, ಕದ್ರಿ,

ಕುಂಬಳೆ, ವಾಮಂಜೂರು, ಮೊಗ್ರಾಲು, ಉದ್ಯಾವರ, ಉಪ್ಪಿನಂಗಡಿ, ಮತ್ತು ವಿಟ್ಲ ರೈತರ ಕೂಟಗಳು ಸೇರುತ್ತಿದ್ದ ಪ್ರಮುಖ ಸ್ಥಳವಾಗಿದ್ದವು." [೧೪]

೧೮೩೭ರ ರೈತ ದಂಗೆಗೆ ಮುಖ್ಯ ಕಾರಣ ಬ್ರಿಟಿಷರ ಕಂದಾಯ ನೀತಿ. ಇದು ಭತ್ತದ ಮೇಲೆ ಯಥೇಚ್ಛವಾಗಿ ನಿಗದಿಗೊಂಡಿದ್ದರೂ, ಹೊಗೆಸೊಪ್ಪು, ಉಪ್ಪು ಅಥವಾ ತರಕಾರಿಗಳ ಮೇಲೂ ಪೇರಿಸಲಾಗಿತ್ತೆಂಬ ವಾದಗಳಿವೆ. ಈ ವಿಚಾರವೇ ಸ್ಥಳೀಯರಿಗೆ 'ಹಕ್ಕಿನ ಪ್ರಶ್ನೆ'ಯಾಗಿ ಮುಂದಕ್ಕೆ ದಂಗೆಯೇಳಲು ಪ್ರೇರಣೆಯಾಯಿತು. ಆದರೆ ಇಲ್ಲೊಂದು ಸ್ಪಷ್ಟೀಕರಣದ ಅವಶ್ಯವಿದೆ.

ಬ್ರಿಟಿಷರ 'ಕಂದಾಯ ನೀತಿ'ಯೊಂದೇ ದಂಗೆಗೆ ಕಾರಣವಾಗಿರಲಾರದು. ಏಕೆಂದರೆ ಭತ್ತ ದಕ್ಷಿಣ ಕನ್ನಡದ ಮುಖ್ಯ ವಾಣಿಜ್ಯ ಬೆಳೆ. ದಂಗೆ ನಡೆದ ಕಾಲದಲ್ಲಿ ಬಹುತೇಕ ೮೦ ರಿಂದ ೯೦ರಷ್ಟು ಶೇಕಡಾ ಪ್ರಮಾಣದ ಕುಟುಂಬಗಳು ಅದನ್ನೇ ನಂಬಿತ್ತು. ತೀರಾ ಖಾಸಗಿಯಾಗಿಯೂ ಭತ್ತದ ಕೃಷಿ ನಡೆಯುತ್ತಿತ್ತು. ಭತ್ತ ಕೃಷಿಯ ಪ್ರಮಾಣ ಅಧಿಕವಾಗಿದ್ದ ಕಾರಣ 'ಕಂದಾಯ' ಅಷ್ಟೊಂದು ಹೊರೆಯಾಗಲಾರದು.

ಹೊಗೆಸೊಪ್ಪನ್ನಂತೂ ಆ ಕಾಲಕ್ಕೆ ಮನೆಮನೆಗಳಲ್ಲಿ ಬೆಳೆಯುತ್ತಿದ್ದರು. ತಂಬಾಕು ಪ್ರತಿ ಮನೆಯ ಆದಾಯದ ಒಂದು ಮೂಲವಾಗಿತ್ತು ಎನ್ನಬಹುದು. ಹಾಗಾಗಿ ಅದರ ಕೊರತೆಯೂ ಅಸಂಭವನೀಯ.

ಕರಾವಳಿ ಭಾಗವಾಗಿರುವ ದಂಗೆಯ ಸ್ಥಳದಲ್ಲಿ ಉಪ್ಪಿನ ಕೊರತೆಯೂ ಸಾಧ್ಯವಿಲ್ಲ. ಸಮುದ್ರ ನೀರಿನಿಂದ ಉಪ್ಪು ತಯಾರಿಕೆ ಈ ಪ್ರದೇಶಗಳ ಪ್ರಮುಖ ಚಟುವಟಿಕೆಯಾಗಿರುವುದರಿಂದಲೇ 'ಉಪ್ಪಿನ ನಾಡು' ಎಂಬ ಪ್ರಸಿದ್ಧಿ ಈ ಭಾಗಕ್ಕಿತ್ತು.

ಈ ಎಲ್ಲಾ ಯಕಶ್ಚಿತ್ ಕಾರಣಗಳಿಗಾಗಿ ದಕ್ಷಿಣ ಕರ್ನಾಟಕದ ಬಹುಭಾಗ ಸಾವು–ನೋವುಗಳು ಉಂಟಾಗುವಂತೆ ದಂಗೆ ನಡೆಯಿತೆಂಬುದನ್ನು ಒಪ್ಪಲು ಕಷ್ಟ. ಎಲ್ಲಾ ಕ್ರಾಂತಿಗಳಿಗೂ ರಾಜಕೀಯ ಹಿನ್ನೆಲೆ ಇದ್ದೇ ಇರುತ್ತದೆ. ವಸಾಹತುಶಾಹಿಗಳು ಆಗಮಿಸಿ ತಮ್ಮ ಅಧಿಕಾರ ಸ್ಥಾಪನೆಯ ಉದ್ದೇಶವಾಗಿ ಪ್ರಮುಖ ಬೆಳೆಗಳ ಮೇಲೆ ತಮ್ಮ ಇಚ್ಛಾನುಸಾರ ತೆರಿಗೆ ನಿಗದಿಗೊಳಿಸಿದರಷ್ಟೆ ಎನ್ನುವುದು ತರ್ಕಾರ್ಹ ವಿಷಯ. ಏಕೆಂದರೆ ಇದಿಷ್ಟೇ ಅವರ ದಬ್ಬಾಳಿಕೆಯ ಕ್ರಮವಾಗಿದ್ದರೆ, ಇಲ್ಲಿನ ಜನರಿಗೆ ದಂಗೆಯೇಳುವಷ್ಟು ಪ್ರಚೋದನೆ ದೊರಕುತ್ತಿರಲಿಲ್ಲ. ಹಾಗಾಗಿ ಇದು ಅಂದಿನ ರೈತ ದಂಗೆಯ ಪ್ರಮುಖ ಕಾರಣವೂ ಅಲ್ಲ ಎನ್ನಬಹುದು.

ಪ್ರಾಯಶಃ ತಮ್ಮನ್ನಾಳುವ ಸ್ಥಳೀಯ ಆಡಳಿತಕ್ಕೆ ಅಡ್ಡಿ–ಆತಂಕಗಳು ಎದುರಾದಾಗ ಇಲ್ಲಿನ ಜನರಲ್ಲಿ ಅಸ್ತಿತ್ವದ ಪ್ರಶ್ನೆ ಉದಯವಾಯಿತು. ಈ ಪ್ರಶ್ನೆಯೇ ಮುಂದಕ್ಕೆ ಕ್ರಾಂತಿಗೆ ಕಾರಣವಾಯಿತು.

ರೈತ ದಂಗೆ ಅದರಲ್ಲೂ ಮುಖ್ಯವಾಗಿ ಕಲ್ಯಾಣಪ್ಪನ ಬಳಗದ ಹೋರಾಟಗಳು ಕೊಡಗು ಸೀಮೆಯಲ್ಲಿ ಆರಂಭವಾಯಿತು ಎಂಬ ಖ್ಯಾತ ಉಲ್ಲೇಖವಿದ್ದರೂ, ಮೂಲತಃ ಇದರ ಆದಿ ಮೈಸೂರಿನಲ್ಲೇ ನಡೆದಿದೆಯಷ್ಟೆ. ಇದು ಮೈಸೂರು ಅರಸನ ಪದಚ್ಯುತಿಯ ತಂತ್ರ. ೧೮೩೦ರಲ್ಲಿ ಮೈಸೂರನ್ನು ಆಳುತ್ತಿದ್ದ ಅರಸರನ್ನು ಪದವಿಯಿಂದ ಕೆಳಗಿಳಿಸಿ, ಅಲ್ಲಿ ಅಧಿಕಾರ ಸ್ಥಾಪಿಸಲು ವಸಾಹತು ಶಾಹಿ ಶಕ್ತಿಗಳು ನಡೆಸಿದ ತಂತ್ರಕ್ಕೆ ವಿರುದ್ಧವಾಗಿ ತೋರಿದ ಕ್ರಾಂತಿಯಿದು. ಇದಕ್ಕೆ ಬ್ರಿಟಿಷರೊಬ್ಬರೇ ಕಾರಣವಲ್ಲ. ಅರಸನ ಪದಚ್ಯುತಿಗೆ ಸ್ಥಳೀಯ ದೊರೆಗಳೂ ಬೆಂಬಲವಾಗಿ ಸಹಕರಿಸಿರಬಹುದು. ಹಾಗಾಗಿ ಈ ದಂಗೆಯ ಆರಂಭ ಮೈಸೂರಿನಿಂದಲೇ ನಡೆದಿರಬಹುದೆಂಬ ನಿರ್ಣಯಕ್ಕೆ ಬರಬಹುದು. ತನ್ನ ಪದಚ್ಯುತಿಗೆಂದೇ ಕೈಗೊಂಡ ತಂತ್ರಕ್ಕೆದುರಾಗಿ ಆಯೋಜಿಸಿದ ಈ ದಂಗೆಯಲ್ಲಿ ಸ್ವತಃ ಮೈಸೂರು ಅರಸನೇ ಸೇರಿಕೊಂಡಿದ್ದನೆಂಬ ವಾದವಿದೆ. ಒಟ್ಟಿನಲ್ಲಿ ಬ್ರಿಟಿಷ್ ಅಧಿಕಾರಕ್ಕೆ ಮೈಸೂರಿನಿಂದಲೇ ದಕ್ಷಿಣ ಕನ್ನಡದ ವರೆಗೆ ತೋರಿದ ಪ್ರತಿರೋಧಗಳ ದಾಖಲೆಯೇ ಈ ಕ್ರಾಂತಿ ಎನ್ನಬಹುದು.

**ಕಲ್ಯಾಣಸ್ವಾಮಿಯ ಬಂಡಾಯ:**

ಲಿಂಗರಾಜನ ಕಾಲದಲ್ಲಿ ಕೊಡಗಿನಲ್ಲಿದ್ದ ಕಂದಾಯ ವ್ಯವಸ್ಥೆ ಕ್ರಿ.ಶ. ೧೮೩೪ರಲ್ಲಿ ಕೊಡಗು ವಸಾಹತುಶಾಹಿ ಆಡಳಿತಕ್ಕೆ ಒಳಪಟ್ಟ ಬಳಿಕವೂ ಮುಂದುವರಿಯಿತು. ಚಿಕ್ಕವೀರ ರಾಜನ ಮಂತ್ರಿಯಾಗಿದ್ದ ಅಪ್ಪಾರಂಡ ಬೋಪು ದಿವಾನ ಮತ್ತು ಚೆಪ್ಪುಡೀರ ಪೊನ್ನಪ್ಪ ದಿವಾನರ ಬ್ರಿಟಿಷ್ ಪರ ತಂತ್ರದಿಂದ ಕೊಡಗು ಅರಸು ಪದಚ್ಯುತಿಗೊಂಡಾಗ ಸಮಗ್ರ ರಾಜ್ಯ ತೋರಿದ ಪ್ರತಿರೋಧ ನೀರಸವಾಗಿದ್ದರೂ, ಆ ಸಂದರ್ಭದಲ್ಲಿ ಎರಡು ಅನೂಹ್ಯ ರೀತಿಯ ಹೋರಾಟ ತಲೆ ಎತ್ತಿತ್ತು. ಒಂದು ಸ್ವಾಮಿ ಅಪರಂಪರನ ಬಂಡಾಯ, ಇನ್ನೊಂದು ಕಲ್ಯಾಣಸ್ವಾಮಿಯ ದಂಗೆ.

ಅಪರಂಪಾರ ಮೂಲತಃ ಮೈಸೂರು ಸೀಮೆಯ ತುಮಕೂರು ಜಿಲ್ಲೆಯ ಹನುಮಂತರಾಯ ಗೋಪಮ್ಮ ದಂಪತಿಯರ ಮಗನಾಗಿದ್ದು, ಎಳವೆಯಲ್ಲಿ ಸಂಸಾರ ತ್ಯಜಿಸಿ, ಸನ್ಯಾಸ ಸ್ವೀಕರಿಸಿ, ಕೆಲವಾರು ಪವಾಡಗಳನ್ನು ಪ್ರದರ್ಶಿಸಿ ಬ್ರಿಟಿಷರ ವಿರುದ್ಧ ಜನರನ್ನು ಸಂಘಟಿಸಿದ್ದ. ಆದರೆ ಕೊಡಗಿನಲ್ಲಿ ಅಪರಂಪಾರನಿಗೆ ಸಾಕಷ್ಟು ಜನಬೆಂಬಲ ದೊರೆಯದ ಕಾರಣ, ಆತ ದಕ್ಷಿಣ ಕನ್ನಡಕ್ಕೆ ಬಂದು ತನ್ನ ಬ್ರಿಟಿಷ್ ವಿರುದ್ಧದ ಹೋರಾಟವನ್ನು ಮುಂದುವರಿಸಿದ. ಆದರೆ, ಕೊಡಗಿನ ಚಿಕ್ಕವೀರನ ಬ್ರಿಟಿಷ್ ಪರ ಮಂತ್ರಿಯಾಗಿದ್ದ ಬೋಪು ದಿವಾನನ ಗೂಢಚರ್ಯೆ ಫಲವಾಗಿ ಮಂಜರಾಬಾದಿನಲ್ಲಿ ಬ್ರಿಟಿಷ್ ಅಧಿಕಾರಿಗಳು ಅಪರಂಪಾರನನ್ನು ಬಂಧಿಸಿದರು. ಕಲ್ಯಾಣಸ್ವಾಮಿ ಮತ್ತು ಪುಟ್ಟ ಬಸವ ಅಪರಂಪಾರನ ಬಲಗೈಯಂತಿದ್ದರು. ಅವನ

ನಿರ್ದೇಶನದಂತೆ ಇವರಿಬ್ಬರೂ ಜನ ಸಂಘಟನೆ ಮತ್ತು ಜನಾಂದೋಲನಗಳಲ್ಲಿ ಸಕ್ರಿಯವಾಗಿದ್ದವರು. ಅಪರಂಪಾರನ ಬಂಧನ ಕಾಲದಲ್ಲಿ ಕಲ್ಯಾಣಸ್ವಾಮಿ ಮತ್ತು ಪುಟ್ಟ ಬಸವರು ತಪ್ಪಿಸಿಕೊಂಡು ಕೊಡ್ಲಿಪೇಟೆಗೆ ಪಲಾಯನ ಮಾಡಿದರು. ೧೮೨೦ರಲ್ಲಿ ಶ್ರೀರಂಗಪಟ್ಟಣದಲ್ಲಿ ಸ್ವಾಮಿ ಅಪರಂಪಾರ ವಿಧಿವಶನಾದ.

ಕೊಡ್ಲಿಪೇಟೆಗೆ ಬಂದು ಸೇರಿದ ಕಲ್ಯಾಣಸ್ವಾಮಿ ತಾನು ದೊಡ್ಡ ವೀರೇಂದ್ರನಿಂದ ಹತನಾದ ಅಪ್ಪಾಜಿರಾಜನ ಎರಡನೆಯ ಮಗ ನಂಜುಂಡರಸನೆಂದು ಹೇಳಿಕೊಂಡು ಕೊಡಗಿನ ಉತ್ತರಭಾಗದಲ್ಲಿ ಜನಸಾಮಾನ್ಯರನ್ನು ಸಂಘಟಿಸತೊಡಗಿದ.

ನಿರಂಜನರು ತಮ್ಮ ಕಾದಂಬರಿ 'ಅಪರಂಪಾರ'ದಲ್ಲಿ ನಾಯಕನನ್ನು ಅಪ್ಪಾಜಿರಾಜನ ಮಗನೆಂದೇ ದಾಖಲಿದ್ದಾರೆ. ಅಲ್ಲದೆ ಈತ ಕೊಡಗು ರಾಜನ ಸೇನಾಧಿಕಾರಿಯಾಗಿರಬಹುದೆಂದೂ, ವೀರರಾಜನ ಆಪ್ತ ಕೋಟಿಯಲ್ಲೊಬ್ಬನಾಗಿದ್ದನೆಂದೂ ಅವರು ಅಭಿಪ್ರಾಯ ಪಟ್ಟಿದ್ದಾರೆ. [೧೫]

ಸ್ವಾಮಿ ಅಪರಂಪಾರ ಮಾಡುತ್ತಿದ್ದ ಬ್ರಿಟಿಷ್ ವಿರೋಧಿ ಹೋರಾಟಗಳ ಮುಂದುವರಿಕೆಯೇ ಕಲ್ಯಾಣಸ್ವಾಮಿಯ ಉದ್ದೇಶವಾಗಿತ್ತು. ಕಲ್ಯಾಣಸ್ವಾಮಿಯ ಬಂಡಾಯದ ಮೂಲ ಸಂಘಟಕ ಸ್ವಾಮಿ ಅಪರಂಪಾರನೆಂದೇ ಹೇಳಬಹುದು. ಆತ ಪ್ರಾರಂಭಿಸಿದ ಕ್ರಾಂತಿಯನ್ನು ಕಲ್ಯಾಣಪ್ಪ ಮುಂದಾಳತ್ವ ವಹಿಸಿ, ವ್ಯಾಪಕವಾಗಿ ಪಸರಿಸಿದನು. ಆದರೆ ಇವರೆಲ್ಲರಿಗೂ ನಿರ್ದೇಶಕನಾಗಿದ್ದವ ಹುಲಿ ಕಡಿದ ನಂಜಯ್ಯ. ಈತ "ಮೂಲತಃ ಹಾಸನ ಜಿಲ್ಲೆಯ ಅರಕಲಗೂಡಿನ ಒಬ್ಬ ಅಕ್ಕಿ ವ್ಯಾಪಾರಿ. ತನ್ನ ಮೈಮೇಲೆ ಬಿದ್ದ ಹುಲಿಯನ್ನು ಕತ್ತಿಯಿಂದ ಕಡಿದು ಓಡಿಸಿದ ಧೀರನೆಂಬುದಕ್ಕಾಗಿ ಅವನ ಹೆಸರಿನ ಹಿಂದೆ 'ಹುಲಿ ಕಡಿದ' ಸೇರಿಕೊಂಡಿತು. [೧೬]

"ಅಪರಂಪಾರನ ಜತೆಗಿದ್ದಾಗ 'ಕಲ್ಯಾಣಸ್ವಾಮಿ' ತಾನು ಅವನ ತಮ್ಮನೆಂದು ಪರಿಚಯಿಸಿಕೊಳ್ಳುತ್ತಿದ್ದ. ಸುಳ್ಯ ಮತ್ತು ಪುತ್ತೂರುಗಳ ೧೧೦ ಗ್ರಾಮಗಳಲ್ಲಿ ಅನುಷ್ಠಾನಗೊಂಡ ಬ್ರಿಟಿಷರ ಕಂದಾಯ ವ್ಯವಸ್ಥೆಯ ವಿರುದ್ಧ ಆಕ್ರೋಶವೆದ್ದಾಗ ಅದರ ಸದುಪಯೋಗವನ್ನು ಪಡೆಯಲೆಂದು ದಕ್ಷಿಣ ಕನ್ನಡಕ್ಕೆ ಬಂದ ಅಪರಂಪಾರನ ಜತೆಯಲ್ಲಿ ಕಲ್ಯಾಣಸ್ವಾಮಿ ಮತ್ತು ಪುಟ್ಟ ಬಸವ ಇಬ್ಬರೂ ಇದ್ದರು. ಕೆಲವೊಮ್ಮೆ ಅಪರಂಪಾರ ತಾನೇ ಕಲ್ಯಾಣಸ್ವಾಮಿಯೆಂದು ಹೇಳಿಕೊಂಡು ಬ್ರಿಟಿಷರ ವಿರುದ್ಧ ಜನರನ್ನು ಸಂಘಟಿಸಿದ್ದು ಇದೆ." [೧೭] ಪುಟ್ಟ ಬಸವ ೧೮೩೭ರ ರೈತ ದಂಡಿನ ಸಂಘಟಕನಾಗಿದ್ದು, ಅವನೂ ಕಲ್ಯಾಣಸ್ವಾಮಿ ಮತ್ತು ಅಪರಂಪಾರ ಎಂಬೆರಡು ಹೆಸರಿನಲ್ಲಿ ನಿರೂಪಗಳನ್ನು ಕಳುಹಿಸುತ್ತಿದ್ದ. ಹಾಗಾಗಿ 'ಕಲ್ಯಾಣಸ್ವಾಮಿ'ಯ ಹೆಸರಿನಲ್ಲಿ ದಾಖಲಾಗಿರುವ ಹೋರಾಟಗಳ ಸಾಧನೆಯಲ್ಲಿ

ನಿಜವಾಗಿಯೂ ಆತನೇ ಮಾಡಿರುವುದು, ಮತ್ತು ಅವನ ಹೆಸರಿನಲ್ಲಿ ಇತರರು ಮಾಡಿರುವುದನ್ನು ಪ್ರತ್ಯೇಕಿಸಿ ವಿಶದೀಕರಣ ನೀಡುವುದು ಕಷ್ಟ.

ಕಲ್ಯಾಣಸ್ವಾಮಿಯ ಹೋರಾಟವು ಅಪ್ಪಾಜಿ ರಾಜನ ಎರಡನೇ ಮಗನೆಂಬ ಹೆಸರಿನಲ್ಲಿ ಕೊಡಗಿನ ಗಡಿನಾಡು, ಎಡೆನಾಡು, ಉಮ್ಮತ್ತನಾಡು ಮತ್ತು ಏಳು ಸಾವಿರ ಸೀಮೆಗಳಲ್ಲಿ ಕೊಡಗಿನ ರಾಜನ ಆಡಳಿತ ಮರುಸ್ಥಾಪನೆಗೆ ನೆರವು ಕೋರಿದನಲ್ಲದೆ, ಸಮ್ಮತಿಸದಿದ್ದರೆ ಶಿಕ್ಷಿಸುವುದಾಗಿ ಎಚ್ಚರಿಸಿದ. ಅಪರಂಪಾರ ಮತ್ತು ಕಲ್ಯಾಣ ಸ್ವಾಮಿ ಬೇರೆ ಬೇರೆ ಕಾರ್ಯಕ್ಷೇತ್ರವನ್ನು ಆರಿಸಿಕೊಂಡರು. ಏಕಕಾಲದಲ್ಲಿ ಎರಡು ಕಡೆಯಿಂದ ಮಡಿಕೇರಿ ಮುತ್ತುವ ತಂತ್ರ ಅವರಿಗಿದ್ದಿರಬಹುದು.

ಕಲ್ಯಾಣಸ್ವಾಮಿ ಮತ್ತು ಅವನ ಜೊತೆಯಲ್ಲಿದ್ದ ಪುಟ್ಟ ಬಸವರನ್ನು ಸ್ವಾಮಿ ಅಪರಂಪಾರ ತನ್ನ ಬಂಧನದ ಮುನ್ಸೂಚನೆ ಸಿಕ್ಕಿದ ತಕ್ಷಣವೇ ಪಲಾಯನ ಮಾಡಲು ತಿಳಿಸಿದ್ದ. ಹಾಗಾಗಿ ಅಪರಂಪಾರ ಮಾತ್ರ ಬ್ರಿಟಿಷರಿಂದ ಬಂಧಿಯಾಗಿ ಕೊನೆಗೆ ತೀರಿಕೊಂಡ. ಇತ್ತ ಕಲ್ಯಾಣಸ್ವಾಮಿಗೆ ಕೊಡಲೀಪೇಟೆಯಿಂದಲೂ ಅಪಾಯದ ಸೂಚನೆ ಎದುರಾಯಿತು. ಆದ್ದರಿಂದಲೇ ಆತ ದಾರಿ ಬದಲಿಸಿ, ಕೊಡಗಿನತ್ತ ಸಾಗಿದ.

ಕಲ್ಯಾಣಸ್ವಾಮಿ ತಾನು ಅಪ್ಪಾಜಿ ರಾಜನ ಮಗನೆಂದೇ ಎಲ್ಲೆಡೆ ಪ್ರಚಾರ ಮಾಡಿದ್ದ ಕಾರಣ, ಅದನ್ನೇ ಬಲವಾಗಿ ನಂಬಿದ್ದ ಕೊಡಗಿನ ಉಮ್ಮತ್ತ ನಾಡಿನ ಜನರು ಆತ ತಮ್ಮೂರಿಗೆ ಬಂದಾಗ ಬಹಳಷ್ಟು ಗೌರವ ಸತ್ಕಾರಗಳಿಂದ ಸ್ವಾಗತಿಸಿದರು. ಬ್ರಿಟಿಷರಿಂದ ಆತನನ್ನು ರಕ್ಷಿಸುವ ಸಲುವಾಗಿ ಜನರೇ ಮುತುವರ್ಜಿ ವಹಿಸಿ, ಬೈತೂರಿಗೆ ಕಳುಹಿಸಿದರು. ಆದರೆ ಲೀ ಹಾರ್ಡಿ ಸೈನಿಕರು ಮಲೆಯಾಳಿ ಸೀಮೆಯ ಸೈನ್ಯದ ಸಹಾಯ ಪಡೆದು, ಕಲ್ಯಾಣ ಸ್ವಾಮಿಯನ್ನು ಬಂಧಿಸಿದಲ್ಲದೆ, ವಿಚಾರಣೆ ನಡೆಸಿ, ಮೈಸೂರಿನ ಸೆರೆಮನೆಗೆ ಅಟ್ಟಿದರು. ಆದರೆ, ಈ ಬಗ್ಗೆ ಅರಿವಿಲ್ಲದ ಸುಳ್ಯದ ರೈತ ಮುಖಂಡರುಗಳು ದಂಡೊಂದನ್ನು ಸಿದ್ಧಪಡಿಸಿ, ಅವರ ನಾಯಕತ್ವ ವಹಿಸಲು ಕಲ್ಯಾಣಸ್ವಾಮಿ ಬರುತ್ತಾನೆಂದು ಕಾದಿದ್ದರು.

### ಕಲ್ಯಾಣಸ್ವಾಮಿ ಮತ್ತು ಮೌಖಿಕ ಚರಿತ್ರೆ

ನಿರ್ದಿಷ್ಟ ಕಾಲಘಟ್ಟದಲ್ಲಿ ಸಾಮಾಜಿಕವಾಗಿ ನಡೆದ ಯಾವುದೇ ವಿದ್ಯಮಾನಗಳಿಗೆ ಎರಡು ವಿಧದ ಆಧಾರಗಳಿರುತ್ತವೆ. ಈ ವಿದ್ಯಮಾನದ ಪ್ರತ್ಯಕ್ಷ ಸಾಕ್ಷಿಗಳು ಇಲ್ಲವೇ ಕೇಳಿ ಅರಿತಿರುವ ಸಮುದಾಯ ಪೀಳಿಗೆಯಿಂದ ಪೀಳಿಗೆಗೆ ಬಾಯಿಂದ ಬಾಯಿಗೆ ಪ್ರಸಾರ-ಪ್ರಚಾರ ಪಡಿಸಿಕೊಂಡ ಮೌಖಿಕ ಸಾಹಿತ್ಯ ಒಂದು ವಿಧದ ಆಧಾರವಾದರೆ, ವಿದ್ಯಮಾನದ ನೇರ ಇಲ್ಲವೇ ಪರೋಕ್ಷ ಮಾಹಿತಿ-ವರದಿಗಳ ಅಕ್ಷರಸ್ಥ ದಾಖಲಾತಿ ಇನ್ನೊಂದು ವಿಧವಾಗಿದೆ.

“ಮೌಖಿಕ ಇತಿಹಾಸ ಎಲ್ಲಾ ಕಾಲದಲ್ಲೂ ಇರುತ್ತದೆ. ಅಕ್ಷರಸ್ಥ ಇತಿಹಾಸ ಎಲ್ಲಾ ಕಾಲದಲ್ಲೂ ಇರಬೇಕೆಂದಿಲ್ಲ. ಸಾಮಾನ್ಯವಾಗಿ ಅಕ್ಷರಸ್ಥ ಇತಿಹಾಸಗಳು ಒಂದು ವ್ಯವಸ್ಥೆಯ ಸಮರ್ಥನೆಗೆ, ಅದರ ರಕ್ಷಣೆಗೆ ಮತ್ತು ಸಮುದಾಯದ ನಿಯಂತ್ರಣಕ್ಕೆ ಇರುತ್ತದೆ. ಇದಕ್ಕೆ ಪರ್ಯಾಯವಾಗಿ ಮೌಖಿಕ ಇತಿಹಾಸ ಸಮುದಾಯಗಳನ್ನು ನಿಯಂತ್ರಿಸುವ ಪ್ರಭುಶಕ್ತಿಯನ್ನು ಪ್ರಶ್ನಿಸುವ, ವಿಶ್ಲೇಷಿಸುವ, ಅಗತ್ಯ ಬಿದ್ದರೆ ಪ್ರತಿಭಟಿಸುವ ಆಶಯದಿಂದ ಕೂಡಿದೆ. ಒಂದು ಪ್ರದೇಶದ, ಒಂದು ಕಾಲದ ಜನರ ಬದುಕಿನ ಸಹಜ ಚರಿತ್ರೆಯನ್ನು ಮೌಖಿಕ ಪರಂಪರೆ ಮತ್ತು ಅಕ್ಷರಸ್ಥ ಪರಂಪರೆಗಳ ಮುಖಾಮುಖಿಯಾದಾಗ ಮಾತ್ರ ರಚನೆಯಾಗುತ್ತದೆ. ಇದೇ ನಿಜವಾದ ಇತಿಹಾಸ.”[೧೮]

“ಇತಿಹಾಸಕ್ಕೆ ಹಲವು ಆಯಾಮಗಳಿವೆ. ಅದು ಇತಿಹಾಸಕಾರನ ಮನೋಧರ್ಮವನ್ನು, ಒಂದು ಸ್ಥಳದ ಪ್ರಾಮುಖ್ಯವನ್ನು, ವ್ಯಕ್ತಿಗಳ ಮಹತ್ವವನ್ನು ಅರಿಯುವುದರಲ್ಲಿರಬಹುದು. ಇತಿಹಾಸಕಾರರೂ ಮಾನವರೇ ಆಗಿರುವುದರಿಂದ ಅನೇಕ ಸಂದರ್ಭಗಳಲ್ಲಿ ಅವರಿಗೆ ಭಾವಾತಿರೇಕದಿಂದ ತಪ್ಪಿಸಿಕೊಳ್ಳಲಾಗದಿರುವುದೂ ಇದೆ. ಹೀಗಾದಾಗ ಇತಿಹಾಸ ತಪ್ಪಾಗಿ ಪುನರ್ನಿರ್ಮಾಣಗೊಳ್ಳಬಹುದು; ಕುರೂಪಗೊಳ್ಳಬಹುದು. ಎಲ್ಲರಿಗೂ ಆಕರಗಳಾಗಿ ಬಳಕೆಯಾಗುವ ಸಾಮಾಗ್ರಿಗಳು ಒಂದೇ ಆಗಿವೆಯಾದರೂ ಅವುಗಳನ್ನು ಬಳಸಿಕೊಳ್ಳುವ ಕ್ರಮದಲ್ಲಿ ಅಂತರವಿದೆ. ಈ ವರೆಗಿನ ಅಧ್ಯಯನಗಳು ಶಾಸನಗಳು, ಕಡತಗಳು, ನಿರೂಪಗಳು, ಬಿನ್ನವತ್ತಳೆಗಳು, ದಿನಚರಿಗಳು, ಕೈಫಿಯತ್ತುಗಳು, ಬಖೈರುಗಳು, ನಾಮೆಗಳು ಹಾಗೂ ಐತಿಹ್ಯ – ಸ್ಥಳ ಪುರಾಣ ಅಥವಾ ಮಹಾತ್ಮೆಗಳನ್ನು ಇತಿಹಾಸದ ಮುಖ್ಯ ಆಕರಗಳೆಂದು ಪರಿಗಣಿಸಿದೆ. ಇವುಗಳಲ್ಲಿ ಶಾಸನಗಳನ್ನು ಹೊರತು ಪಡಿಸಿದರೆ ಉಳಿದವು ಮೂಲತಃ ಮೌಖಿಕ ಪರಂಪರೆಯವು. ಜನಮಾನಸದಲ್ಲಿ ಉಳಿದುಹೋಗಿದ್ದ ಮಾಹಿತಿಗಳನ್ನು ಲಿಖಿತರೂಪಕ್ಕೆ ತಂದ ಬಳಿಕ ಅವು ಗ್ರಂಥಸ್ಥ ಮಾಹಿತಿಗಳಾಗಿ ರೂಪಾಂತರಗೊಂಡವು”. [೧೯]

ಪ್ರಸ್ತುತ ‘ಕಲ್ಯಾಣಸ್ವಾಮಿ’ಯ ಕುರಿತಾದ ಅಧ್ಯಯನಕ್ಕೂ ಈ ಪ್ರಕಾರದ ಅಕ್ಷರಸ್ಥ ಮತ್ತು ಮೌಖಿಕ ಇತಿಹಾಸಗಳೆರಡನ್ನು ಪರಿಶೋಧಿಸಬೇಕಾಗಿರುವುದು ಅವಶ್ಯವಾದರೂ, ಆತನ ಇತಿಹಾಸವನ್ನು ನೇರವಾಗಿ ನೆನಪು, ಅರಿವು ಮತ್ತು ಪ್ರತ್ಯಕ್ಷ ಪ್ರಮಾಣಗಳಿಂದ ಕಟ್ಟುವ ಕಾಲಘಟ್ಟದಲ್ಲಿ ನಾವಿಂದು ನಿಂತಿಲ್ಲ.

ಕಲ್ಯಾಣಸ್ವಾಮಿಯ ಇತಿಹಾಸವನ್ನು ಒಂದು ಸ್ಥಳೀಯ ಚರಿತ್ರೆಯ ನೆಲೆಯಲ್ಲಿ ಸಂರಚಿಸುವ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕು ಮುಖ್ಯ ಕೇಂದ್ರವಾಗಿ ಕಾಣಿಸುತ್ತದೆ. ಏಕೆಂದರೆ ಕಲ್ಯಾಣಪ್ಪನ ಹುಟ್ಟು, ಬೆಳವಣಿಗೆ ಮತ್ತು ರಾಜಶಾಹಿ ವಲಯದ ಸಾಧನೆ ಆತನ ಬದುಕಿನ ಮುಕ್ಕಾಲು ಭಾಗ ಕೊಡಗಿನಲ್ಲಿಯೇ

ಕಂಡುಬಂದರೂ, ಆತನ ಕ್ರಾಂತಿಯ ಬಾಳ್ವೆಯ ಪ್ರಧಾನ ದಿನಗಳು ಮತ್ತು ಸಾಹಸಗಳು ಮೂಡಿ ಬಂದಿರುವುದು ಸುಳ್ಯ ತಾಲೂಕಿನಲ್ಲಿಯೇ. ಅಮರ ಸುಳ್ಯ ಕ್ರಾಂತಿಯ ಶಕ್ತಿ ಕೇಂದ್ರವಾಗಿದ್ದ ಈ ಸುಳ್ಯ ಪರಿಸರದಲ್ಲಿ ಆತನ ಕ್ರಾಂತಿಯ ವಿರಾಡ್ರೂಪ ಅನಾವರಣಗೊಂಡಿರುತ್ತದೆ.

ಆದರೆ, ಕಲ್ಯಾಣಪ್ಪನ ಕ್ರಾಂತಿಯ ೧೮೩೭ರ ಕಾಲದಿಂದ ಪ್ರಸ್ತುತ ಅಧ್ಯಯನದ ಕಾಲಕ್ಕೆ ಸುದೀರ್ಘ ವರ್ಷಗಳ ಅಂತರವಿರುವುದರಿಂದ ಕಲ್ಯಾಣಸ್ವಾಮಿಯನ್ನು ನೇರವಾಗಿ ಕಂಡವರೂ, ಕ್ರಾಂತಿ ಕಥೆಯನ್ನು ನೆನೆಪಿಸಿಕೊಳ್ಳುವವರೂ, ಅರಿತವರೂ ಆಧಾರವಾಗಿರುತ್ತಾರೆಂಬುದನ್ನು ಇಲ್ಲಿ ನಿರೀಕ್ಷಿಸುವಂತಿಲ್ಲ.

ಧಾರ್ಮಿಕ ವಲಯಕ್ಕೆ ಈತನ ಸಂಬಂಧವಿಲ್ಲದ ಕಾರಣ, ಈ ಇತಿಹಾಸಿಕ ವೀರನ ಕಥೆ–ಕಥನಗಳನ್ನು ಜನಪದ ಸಾಹಿತ್ಯದ ಮೂಲಕ ತಲೆಮಾರಿನಿಂದ ತಲೆಮಾರಿಗೆ ಮುಂದುವರಿಸಿಕೊಂಡು ಬರುವ ಭಕ್ತಿ–ಆಸಕ್ತಿಗಳನ್ನೂ ನಮ್ಮ ಜನಪದರು ತೋರಲಿಲ್ಲ. ಹೀಗಾಗಿ ಸದ್ಯದ ಕಾಲಘಟ್ಟಕ್ಕೆ ಕಲ್ಯಾಣಪ್ಪನ ಕುರಿತಾಗಿ ಗೌರವಾಸಕ್ತಿ ತೋರಿ ಸಂಶೋಧನೆ, ಅಧ್ಯಯನ ನಡೆಸಿರುವ ವಿದ್ವಾಂಸರು, ಸಂಶೋಧಕರೇ ಈ ಬಗ್ಗೆ ಮೌಖಿಕ ಚರಿತ್ರೆ ಕಟ್ಟುವಲ್ಲಿ ಮುಖ್ಯ ಮಾಹಿತಿದಾರರಾಗ ಬೇಕಾಗಿರುವುದು ಅನಿವಾರ್ಯವಾಗಿದೆ.

ವಸಾಹತುಶಾಹಿ ಆಡಳಿತಕ್ಕೆ ವಿರುದ್ಧ ನಿಂತು, ಕ್ರಾಂತಿ ಸಾರಿದನೆಂಬ ಕಾರಣಕ್ಕೆ ಕಲ್ಯಾಣಪ್ಪನ ಸ್ವಾತಂತ್ರ್ಯ ಹೋರಾಟಗಳೆಲ್ಲವೂ ಒಂದು ಸ್ವಾರ್ಥ ಪ್ರೇರಿತ ದಂಗೆ, ದರೋಡೆ, ಮೋಸ, ಗಲಭೆ, ಲೂಟಿ ಎಂಬಂತೆ ಚಿತ್ರಿತವಾಗಿರುವುದು ನಮ್ಮ ಐತಿಹಾಸಿಕ ದುರಂತ.

ಇದಕ್ಕೆ ಮುಖ್ಯ ಕಾರಣ ಆಡಳಿತ ವ್ಯವಸ್ಥೆಯೊಂದರ ವಿರುದ್ಧದ ಹೋರಾಟಗಳ ಉದ್ದೇಶವನ್ನು ತಿರುಚಿ ಬರೆದಿರುವ ಕುತಂತ್ರವೇ ಆಗಿದೆ. ನಮಗೆ ಇತಿಹಾಸವನ್ನು ಕೊಟ್ಟವರು ಬ್ರಿಟಿಷರು, ತಮಗೆ ಬೇಕಿರುವಂತೆ ಮತ್ತು ಪೂರಕವಾಗುವಂತೆ ಇತಿಹಾಸ ಬರೆದಿಟ್ಟಿರುವುದು ಅವರ ಸಾಂದರ್ಭಿಕ ಚಾಣಕ್ಷತೆಗೆ ಸಾಕ್ಷಿ. ಬರೆದಿರುವ ಇತಿಹಾಸ ಸರಿಯೋ ತಪ್ಪೋ ಎಂಬ ವಿವೇಚನೆ ಮಾಡುವ ಶಕ್ತಿ ಸಾಮರ್ಥ್ಯಗಳೂ ನಮಗೆ ಆ ಸಂದರ್ಭದಲ್ಲಿ ಇಲ್ಲದ ಕಾರಣ, ಅವರು ರಚಿಸಿಕೊಟ್ಟ ಇತಿಹಾಸವೇ ನಮಗಿಂದು ಪರಮ ಪ್ರಮಾಣವಾಯಿತು. ಇದಕ್ಕೆ ಆಗ ನಮ್ಮಲ್ಲಿದ್ದ ವಿದ್ಯಾವಂತರ ಕೊರತೆಯೇ ಮೂಲ ಕಾರಣ.

“ನಮ್ಮ ಪ್ರಾಚೀನ ಐತಿಹಾಸಿಕ ಬರವಣಿಗೆಗಳು ಕೇವಲ ಆಳುವವರ, ಪ್ರತಿಷ್ಠಿತರ ಕಥೆಗಳನ್ನು ಮಾತ್ರವೇ ಹೇಳಿವೆ ಮತ್ತು ಅವನ್ನೇ ಸಂಪೂರ್ಣ ಚರಿತ್ರೆ

ಎಂದು ದಾಖಲಿಸಿವೆ. ಕಾಲಕ್ರಮೇಣ ಅವುಗಳೇ ವಾಸ್ತವವೆಂಬ ಕಲ್ಪನೆಯನ್ನು ಇತಿಹಾಸಕಾರರಲ್ಲಿ ಮತ್ತು ಜನಸಾಮಾನ್ಯರಲ್ಲಿ ಮೂಡಿಸಿವೆ. ಇವು ಆರಂಭದಲ್ಲಿ ತಿಳೀದೇ ನಡೆದುದು ಮತ್ತು ಅನಂತರದಲ್ಲಿ ತಿಳಿದೋ ತಿಳಿಯದೆಯೋ ನಡೆದುದು ಅದೇನೇ ಇರಲಿ, ಇದರಿಂದ ಸಾಮಾನ್ಯರ ಬದುಕಿನ ಬಹುಮುಖಗಳು ಅಂಚಿನಲ್ಲೇ ಉಳಿಯುವಂತಾಯಿತು. ಹೀಗೆ ಆಯಾ ಕಾಲಘಟ್ಟದಲ್ಲಿ ಪ್ರಭುತ್ವದ ಅಧೀನವಾಗಿದ್ದ ಅಸಂಖ್ಯ ಜನಸಮುದಾಯಗಳ ಸಂಸ್ಕೃತಿಯಲ್ಲಿದ್ದ ಅಮೂಲ್ಯ ಅಂಶಗಳು ಮರೆಯಲ್ಲೇ ಉಳಿದವು." [೨೦]

ಆ ನಂತರದಲ್ಲಿ ಬ್ರಿಟಿಷ್ ವಿರಚಿತ ಇತಿಹಾಸದಿಂದ ಪ್ರಭಾವಿತರಾದ ದೇಸೀ ಇತಿಹಾಸಕಾರರು ಅವನ್ನೇ 'ಸತ್ಯ ಚರಿತ್ರೆ'ಗಳೆಂಬಂತೆ ಪುನರ್ರಚಿಸಿದರು. ಹಾಗಾಗಿ ಬ್ರಿಟಿಷ್ ವಸಾಹತುಶಾಹಿಗೆ 'ದಂಗೆಕೋರ'ರೆಂದು ಕಂಡವರು ಭಾರತೀಯ ಇತಿಹಾಸಕಾರರಿಗೂ, ಆ ಮೂಲಕ ಜನ ಸಾಮಾನ್ಯರಿಗೂ ಅದೇ ರೀತಿ ಗೋಚರವಾಗುವಂತಾಯಿತು. ಕಲ್ಯಾಣಪ್ಪನ ಇತಿಹಾಸದಲ್ಲಿ ನಡೆದಿರುವುದೂ ಇದೇ ಬಗೆಯ 'ಅನ್ಯಾಯ' ಎನ್ನಬಹುದು.

ಈ ಬಗೆಗಿನ ಕಪೋಲ ಕಲ್ಪಿತ ತಪ್ಪು ಗ್ರಹಿಕೆಗಳು ಸುಳ್ಯದಿಂದೀಚೆಗೆ ಹೆಚ್ಚಾಗಿರುವುದು ಗಮನೀಯ. ಇದನ್ನು ದಕ್ಷಿಣ ಕನ್ನಡದುದ್ದಕ್ಕೂ (ಕುಂಬಳೆ ಗಡಿ ಪ್ರದೇಶದ ತನಕ) ಇತ್ತೀಚಿನವರೆಗೂ ಪ್ರಕಟಗೊಂಡಿರುವ ಕಲ್ಯಾಣಪ್ಪನ ಕಥಾ ಸಂಬಂಧಿ ಬಹುತೇಕ ಕೃತಿಗಳಿಂದ ಸ್ಪಷ್ಟಪಡಿಸಬಹುದು.

ಉದಾಹರಣೆಗೆ, ತುಳುನಾಡಿನ ಮಾಯಿಪ್ಪಾಡಿ ರಾಜ ಮನೆತನದ ಉದಯವರ್ಮರಾಜರು ಹೇಳುವಂತೆ,

"ಕ್ರಿ.ಶ. ೧೮೩೭ರಲ್ಲಿ 'ಕೊಡಗಿನ ಗುಲ್ಲು' ಅಥವಾ ಕಲ್ಯಾಣಪ್ಪನ ಕಾಟಕಾಯಿ' ಆರಂಭವಾಯಿತು. ಕ್ರಿ.ಶ. ೧೮೩೭ರಲ್ಲಿ ಕಂಪೆನಿ ಸರಕಾರದ ಆಡಳಿತೆಯನ್ನು ವಿರೋಧಿಸಿ ತಾನು ಕೊಡಗಿನ ಅರಸರ ಸಂಬಂಧಿಕನೆಂದು ಹೇಳಿ ಕೊಡಗಿನ ರಾಜಹಕ್ಕಿನ ಅಧಾರದ ಮೇಲೆ ಆಧರಿಸಿಕೊಂಡು ಕಲ್ಯಾಣಸ್ವಾಮಿ ಎಂಬುವವನು ಗುಲ್ಲೆಬ್ಬಿಸಿದನು. ಕೊಡಗಿನಲ್ಲಿ ಕಲ್ಯಾಣಪ್ಪನಿಗೆ ಸಾಕಷ್ಟು ಬೆಂಬಲಿಗರು ದೊರಕದೆ ಇದ್ದುದರಿಂದ ಅವನ ಉಪಟಳವು ಬಳಿಯ ರಾಜ್ಯವಾದ ಕುಂಬಳೆ ಸೀಮೆಯಲ್ಲಿ ಹೆಚ್ಚಾಯಿತು. ಸುಳ್ಯ, ಪಂಜಗಳಲ್ಲಿ ಅವನ ಪೀಕಲಾಟ ನಡೆಯಿತು. ಪುತ್ತೂರು, ಬಂಟ್ವಾಳ, ಕುಂಬಳೆ ಸೀಮೆಗಳಲ್ಲಿ ಕಲ್ಯಾಣಪ್ಪನ ಜನರು ಕೊಲೆ, ಸುಲಿಗೆ, ದರೋಡೆಗಳನ್ನು ನಡೆಸಿದರು.

ಕುಂಬಳೆ ಸೀಮೆಯ ಅರಸರು ತಲಚೇರಿಯಲ್ಲಿದ್ದರೂ ಕುಂಬಳೆ, ಪುತ್ತೂರು ಮತ್ತು ಕೊಡಗಿನರಸರಿಗೆ ಕುಂಬಳೆ ಅರಸರು ಕೊಟ್ಟಿರುವ ರಾಜ್ಯಗಳಿಂದ ಒಕ್ಕಲಿಗರು

ಸೈನಿಕರೊಂದಿಗೆ ಕೂಡಿಕೊಂಡು ಕತ್ತಿ–ಕೋವಿಗಳನ್ನು, ಉಂಡೆಮದ್ದುಗಳನ್ನು ಅವರವರೇ ಸಿದ್ಧ ಮಾಡಿಕೊಂಡು ತಾಲೂಕು ಕಚೇರಿಗಳಿಗೆ ಕಳುಹಿಸಿಕೊಡಬೇಕೆಂದು ಕುಂಬಳೆ ಅರಸರ ಆಜ್ಞೆಯಿತ್ತು. ಇದು ಬಹುಶಃ ಟಿಪ್ಪು ಸುಲ್ತಾನ ಮತ್ತು ಕಲ್ಯಾಣಸ್ವಾಮಿಗಳಿಂದ ಬಂದೊದಗಿದ ಕೊಲೆ, ದಂಗೆ, ದರೋಡೆಗಳನ್ನು ಎದುರಿಸಲಿಕ್ಕೆ ಎಂದು ತೋರುತ್ತದೆ." [೨೧]

ಈ ಉಲ್ಲೇಖದ ಸಂದರ್ಭದಲ್ಲೇ ಪ್ರಸ್ತುತ ಲೇಖಕರು ಕುಂಬಳೆಯಲ್ಲಿ ಕಲ್ಯಾಣಪ್ಪನಿಗೆ ಸಂಬಂಧಿಸಿದ ಐತಿಹ್ಯವೊಂದನ್ನು ತಿಳಿಸುತ್ತಾರೆ.

"ಕಲ್ಯಾಣಸ್ವಾಮಿಯು ತನ್ನ ಕಾಟಕಾಯಿಯ ವೇಳೆ ಕುಂಬಳೆ ವಠಾರದಲ್ಲಿ ಹೇರಳ ಸುಲಿಗೆ ದರೋಡೆಗಳನ್ನು ಮುಗಿಸಿಕೊಂಡು ಹೋಗುವ ದಾರಿಯಲ್ಲಿ ಎಡನಾಡು ಬಯಲಿಗೂ ಇಳಿದನಂತೆ. ಆಗ ಮಧ್ಯಾಹ್ನ ಹೊತ್ತಾಗಿದ್ದರಿಂದ ಕಲ್ಯಾಣ ಸ್ವಾಮಿಗೂ ಅವನ ಪರಿವಾರಕ್ಕೂ ಹಸಿವೆ ಬಾಯಾರಿಕೆಗಳಾಗಿದ್ದವು. ಇಲ್ಲಿಯ ಒಂದು ಮನೆಯವರು ಇವರೆಲ್ಲರಿಗೂ ಚೆನ್ನಾದ ಒಂದು ಊಟ ಮಾಡಿಸಿದ್ದರು. ಊಟವಾದ ಮೇಲೆ ಕಲ್ಯಾಣಪ್ಪನು ತನ್ನ ಪರಿವಾರದವರಲ್ಲಿ "ಇದು ಉಂಡಮನೆ ಆದ್ದರಿಂದ ಇದೊಂದನ್ನು ಬಿಟ್ಟು ಉಳಿದೆಲ್ಲಾ ಮನೆಗಳನ್ನು ಲೂಟಾಯಿಸಿರಿ" ಎಂದು ಆಜ್ಞಾಪಿಸಿದನಂತೆ. ಈ ಉಂಡ ಮನೆಯೇ ಕೊನೆಗೆ 'ಉಂಡೆಮನೆ' ಎಂದಾಯಿತು. ಇಂದಿಗೂ ಈ ಉಂಡೆ ಮನೆತನದವರನ್ನು ಕಾಣಬಹುದು." [೨೨]

ಈ ಐತಿಹ್ಯದ ಸತ್ಯಾಸತ್ಯತೆಯ ಬಗ್ಗೆ ತರ್ಕಗಳಿದ್ದರೂ, ಕಲ್ಯಾಣಪ್ಪನಿಗೆ ಸಂಬಂಧಿಸಿದಂತೆ ಜನರಲ್ಲಿ ಮೌಖಿಕವಾಗಿ ಇಂದಿಗೂ ರೂಢಿಯಲ್ಲಿರುವ ಕೆಲವೇ ಕೆಲವು ವಿರಳ ಮಾಹಿತಿ–ನಂಬಿಕೆಗಳಲ್ಲಿ ಇದೂ ಒಂದೆನ್ನಬಹುದು.

ಕೊಡಗಿನ ಸುಳ್ಯದವರೆಗೆ ಕಲ್ಯಾಣಪ್ಪನ ಕುರಿತಾದ ಲಿಖಿತ ಮತ್ತು ಮೌಖಿಕ ದಾಖಲೆಗಳು ಕೊಂಚ ಹೇರಳವಾಗಿ ಲಭಿಸುತ್ತದೆ. ಈ ದಾಖಲೆಗಳಲ್ಲಿ ಬಹುತೇಕ ಕಲ್ಯಾಣಪ್ಪನ ಜೀವನ–ಕ್ರಾಂತಿಗಳನ್ನು ಸಕಾರಾತ್ಮಕವಾಗಿ ನಿರೂಪಿಸುವುದನ್ನು ಗಮನಿಸಬೇಕು. ಆದರೆ, ಸುಳ್ಯದಿಂದ ಪುತ್ತೂರು, ಮಂಗಳೂರಿನಿಂದೀಚೆಗೆ ಕುಂಬಳೆಯವರೆಗೆ ಅವನ ಕುರಿತಾದ ದಾಖಲೆಗಳು ತೀರಾ ವಿರಳ ಆದರೂ ಲಭಿಸುವ ಬೆರಳೆಣಿಕೆಯ ದಾಖಲೆಗಳೆಲ್ಲವೂ ಅವನನ್ನೊಬ್ಬ 'ದಂಗೆಕೋರ'ನೆಂಬಂತೆ ನಕಾರಾತ್ಮಕ ವ್ಯಕ್ತಿತ್ವವಾಗಿಯೇ ಚಿತ್ರಿಸುವುದು ಕುತೂಹಲಕರವಾಗಿದೆ.

ಮಂಗಳೂರಿನಲ್ಲಿ ಆ ಕಾಲಕ್ಕೆ ಕಾರ್ಯನಿರ್ವಹಿಸುತ್ತಿದ್ದ ಬಾಶೆಲ್ ಮಿಶನನ್ನು ಕೇಂದ್ರವಾಗಿಟ್ಟುಕೊಂಡು, ಈ ಪ್ರದೇಶಗಳಲ್ಲಿ ವಸಾಹತುಶಾಹಿ ಪ್ರಾಬಲ್ಯದ ಮುದ್ರೆ ಪ್ರಖರವಾಗಿದ್ದದ್ದೂ ಇದಕ್ಕೆ ಕಾರಣವೆನ್ನಬಹುದು. ಕಲ್ಯಾಣಪ್ಪನ ಮರಣಾನಂತರ ಆತನ 'ಕಾಟ್‌ಕಾಯ್' ವಸ್ತುವಾಗಿದ್ದ 'ಕಲ್ಯಾಣಪ್ಪನ ಪ್ರಸಂಗ' ಎಂಬ ಯಕ್ಷಗಾನ

ಪ್ರಸಂಗದ ಹಸ್ತಪ್ರತಿಗಳೆಲ್ಲವನ್ನೂ ಬಾಸೆಲ್ ಮಿಶನ್ ಛಾಪಖಾನೆಯಲ್ಲಿಯೇ ಸುಟ್ಟು ಹಾಕಿದರು ಎಂಬ ಗೋವಿಂದ ಪೈಗಳ ಮಾಹಿತಿಯೂ ಇಲ್ಲಿ ಗಮನಿಸಬೇಕಾಗಿದೆ. [೨೩] ಇದರಿಂದಾಗಿ, ಕಲ್ಯಾಣಪ್ಪನ 'ವಿರುದ್ಧ ಶಕ್ತಿ'ಗಳು ಹೆಚ್ಚು ಪ್ರತಿರೋಧವನ್ನು ತೋರಿರುವುದು ಇಲ್ಲಿಯೇ ಎನ್ನಬಹುದು.

ಇದಕ್ಕೆ ಇನ್ನೂ ಕೆಲವು ಆಧಾರಗಳನ್ನು ನೀಡಬಹುದು. ಕಲ್ಯಾಣಪ್ಪನ ಕಾಲಕ್ಕಾಗುವಾಗ ಆಡಳಿತದಲ್ಲಿದ್ದ ಬ್ರಿಟಿಷ್ ವಸಾಹತುಶಾಹಿಗಳೊಂದಿಗೆ ಸ್ಥಳೀಯ ರಾಜಮನೆತನದವರು ಮತ್ತು ಭೂಮಾಲಿಕ ಜಮೀನ್ದಾರರು, ಕೆಲವೆಡೆ ಬ್ರಾಹ್ಮಣ ಪುರೋಹಿತಶಾಹಿ ವರ್ಗದವರೂ ಕೈಜೋಡಿಸಿದ್ದರು ಎಂಬುದು ವಿಶದವಾಗುತ್ತದೆ. ಏಕೆಂದರೆ, ಕುಂಬಳೆಯಲ್ಲಿ ಕಲ್ಯಾಣಪ್ಪನ ಬಳಗದ ಕ್ರಾಂತಿಗೆ ಪ್ರತಿರೋಧಿಸಿದವರು ಕೂಡಲು ರಾಜ ಮನೆತನದ ದೊಡ್ಡ ಸುಬ್ಬಯ್ಯ ಶಾನುಭೋಗರು. ಇವರು ವಸಾಹತುಶಾಹಿ 'ಕೃಪಾಪೋಷಿತ' ಜಮೀನ್ದಾರರೂ, ಶ್ರೀಮಂತ ಬ್ರಾಹ್ಮಣ ರಾಜ ಮನೆತನದವರೂ ಆಗಿದ್ದರೆಂಬುದು ತಿಳಿಯಬಹುದು.

ಅದೇ ಸಂದರ್ಭದಲ್ಲಿ ತೆಂಕುಂಬಳೆ ಕೋಟೆಯಲ್ಲಿ ಪಾರುಪತ್ತೆ ನಡೆಸುತ್ತಿದ್ದ ಸುಬ್ರಾಯ ಹೆಗ್ಡೆ ಎಂಬುವವನು ಕಲ್ಯಾಣಪ್ಪನ ಪಡೆಯನ್ನು ಸೇರಿ, ಅವರಿಗೆ ಹೇರಳ ನೆರವಿತ್ತನೆಂಬುದನ್ನು ಮರೆಯುವಂತಿಲ್ಲ. [೨೪]

## ಕಲ್ಯಾಣಪ್ಪನ ಬಂಡಾಯದ ಅಂತ್ಯ :

ದಕ್ಷಿಣ ಕನ್ನಡದ ಆಡಳಿತ ಭಾಗವಾದ ಮಂಗಳೂರು ಕಲ್ಯಾಣಸ್ವಾಮಿಯ ಚರಿತ್ರೆಯಲ್ಲಿ ದಾರುಣ ಪಾತ್ರವನ್ನು ವಹಿಸುತ್ತದೆ. ಎಲ್ಲಾ ಸ್ವಾತಂತ್ರ್ಯ ಕ್ರಾಂತಿಗಳಿಗೂ ಮಂಗಳೂರು ಮತ್ತು ಸುತ್ತಮುತ್ತಗಳಲ್ಲಿ ಪ್ರತಿರೋಧ ತೀವ್ರವಾಗಿತ್ತು. ಈ ಪ್ರತಿರೋಧದ ಪರಿಣಾಮ ಕಲ್ಯಾಣಸ್ವಾಮಿಯ ಪರಿವಾರವೂ ಸೇರಿದಂತೆ ಆತನೂ ಇಲ್ಲಿಯೇ ದುರಂತ ಅಂತ್ಯವನ್ನು ಕಾಣಬೇಕಾಯಿತು.

೧೮೩೭ ಮಾರ್ಚ್ ೩೦ರಂದು ಪೂಮಲೆಯಿಂದ ಹೊರಟ ೧,೫೦೦ ಕ್ಕಿಂತಲೂ ಹೆಚ್ಚು ರೈತರ ದಂಡು ಬೆಳ್ಳಾರೆ ತಲುಪಿತು. ಅಲ್ಲಿ ಅದೇ ದಿನ ರಾತ್ರಿ ರೈತರು ಊರನ್ನು ಮುತ್ತಿಗೆ ಹಾಕಿದ್ದು ಬಂಡಾಯದ ನೈಜ ಪ್ರಾರಂಭವಾಗಿತ್ತು. ಸರಕಾರಿ ಕಛೇರಿಯನ್ನು ವಶಪಡಿಸಿಕೊಳ್ಳುವುದರೊಂದಿಗೆ, ಬ್ರಿಟಿಷ್ ಸಂಪರ್ಕವನ್ನು ದೂರೀಕರಿಸುವುದು ಇದರ ಉದ್ದೇಶವಾಗಿತ್ತು. ದಂಗೆಕೋರರಿಗೆ ಪ್ರಜೆಗಳನ್ನು ಲೂಟಿಮಾಡುವ ಉದ್ದೇಶವಿರಲಿಲ್ಲ ಎನ್ನುವುದಕ್ಕೆ ಲೆನಿನ್‌ನ ವರದಿಯಲ್ಲಿ ಆಧಾರಗಳಿವೆ.

ನಂತರ ಪುತ್ತೂರಿನ ಖಜಾನೆಯನ್ನು ವಶಪಡಿಸಿಕೊಳ್ಳಲಾಯಿತು. ಆಗ ಅಲ್ಲಿನ ನೌಕರರು ತಕ್ಕ ಮಟ್ಟಿನ ಪ್ರತಿರೋಧ ತೋರಿದರು. ರೈತ ದಂಡು ತಮ್ಮ ಮೇಲೆ ಭರವಸೆ ಹುಟ್ಟುವಂತೆ ಮಾಡಿದರು.

ಸ್ವಇಚ್ಚೆಯಿಂದ ಈ ದಂಡಿಗೆ ಸೇರಿಕೊಂಡ ರೈತರಿಗೆ ಕೈಗೆ ಸಿಕ್ಕಿದ್ದೇ ಆಯುಧವಾದ ಕಾರಣ ಅವರನ್ನು ‘ಕೊತ್ತಳಿಂಗೆ ಬಂಟರು’ [೨೫] ಎಂದೂ ಅಪಹಾಸ್ಯ ಮಾಡಲಾಯಿತು.

ರೈತದಂಡು ನಂದಾವರ ಪರಸರದಲ್ಲಿದ್ದಾಗ ಶ್ರೀ ಕ್ಷೇತ್ರ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ಮಂಜಯ್ಯ ಹೆಗ್ಗಡೆ ಎರಡು ಫಿರಂಗಿಗಳನ್ನು ಇವರಿಗೆ ಕಳುಹಿಸುವ ಮೂಲಕ ತಮ್ಮ ಬೆಂಬಲವನ್ನು ಸೂಚಿಸಿದರೆನ್ನುವುದಕ್ಕೆ ದಾಖಲೆಗಳಿವೆ. ಮುಂದೆ ಮೂಡುಬಿದಿರೆಗೆ ಬಂದಾಗ, ಬಸದಿಯಿಂದಲೂ ಒಂದು ಫಿರಂಗಿಯನ್ನು ರವಾನಿಸಿರುವುದು, ರೈತ ಬಂಡಾಯವನ್ನು ಮೇಲ್ವರ್ಗವೂ ಬೆಂಬಲಿಸಿದಕ್ಕೆ ಸಾಕ್ಷಿ.

“ಎಪ್ರಿಲ್ ೫ರಂದು ಮಂಗಳೂರನ್ನು ತಲುಪಿದ ರೈತದಂಡು, ಅಲ್ಲಿನ ‘ನಿಶಾನಿಗುಡ್ಡೆ’ಯಲ್ಲಿ (ಈಗಿನ ಬಾವುಟಗುಡ್ಡೆ) ಗಾಳಿಗೆ ಪಟಪಟಿಸುತ್ತಾ ‘ಇದು ಮಂಗಳೂರು’ ಎಂಬುವುದನ್ನು ಸಮುದ್ರದಲ್ಲಿ ಸಂಚರಿಸುವ ಹಡಗುಗಳಿಗೆ ಸೂಚಿಸುತ್ತಿದ್ದ ಬ್ರಿಟಿಷರ ಧ್ವಜವನ್ನು ಕೆಳಗಿಳಿಸಿ ಸುಟ್ಟು ದೊಡ್ಡ ವೀರ ರಾಜನ ಕಾಲದ ‘ವಿ’ ಮುದ್ರಾಂಕಿತ ಧ್ವಜವನ್ನು ಏರಿಸಿ ವಸಾಹತುಶಾಹಿ ಆಡಳಿತವು ಅಂತ್ಯಗೊಂಡದ್ದನ್ನು ಸಾರಿತು.” [೨೬] ಈ ಎಲ್ಲಾ ಬೆಳವಣಿಗೆಯನ್ನು ಬಡಜನರ ರಕ್ತಹೀರಿ ಮೆರೆಯುತ್ತಿದ್ದ ಪರದೇಶಿಗಳ ಮತ್ತು ಅವರ ಕೃಪಾಪೋಷಿತ ಸ್ವದೇಶಿ ವ್ಯಾಪಾರಿಗಳು ‘ಕಲ್ಯಾಣಪ್ಪನ ಕಾಟಕಾಯಿ’ ಎಂದು ಕರೆದರು. ಇವರಲ್ಲಿ ಬ್ರಾಹ್ಮಣ, ಬಂಟ, ಕೊಂಕಣಿ ಸಮುದಾಯದ ಬಹುತೇಕರು ಕಲ್ಯಾಣಪ್ಪನ ದಂಡು ತಮ್ಮ ಸ್ವತ್ತನ್ನು ಲೂಟಿ ಮಾಡಿದೆ ಎಂದು ಪುಕಾರು ಹಬ್ಬಿಸಿ, ಅದನ್ನು ದರೋಡೆಕೋರರ ದಂಡು ಎಂದು ಅಪಪ್ರಚಾರ ಮಾಡಿತು.

ಬೋಳಾರದಲ್ಲಿ ಸುಬ್ರಯ ಹೆಗ್ಡೆಯನ್ನು ಬಂಧಿಸಿ ಜಲಸಮಾಧಿ ಮಾಡಿದ ಬಳಿಕ, ಕಲ್ಯಾಣಪ್ಪನ ಕ್ರಾಂತಿಗೆ ಸದಾ ಜೊತೆಯಾಗಿದ್ದು ಬೆಂಬಲ ನೀಡುತ್ತಿದ್ದ ರಾಜ ಲಕ್ಷ್ಮಪ್ಪರಸ ಎಂಬುವವನನ್ನು ಬ್ರಿಟಿಷರು ಬಂಧಿಸಿ, ಮಂಗಳೂರು ಜೈಲಿನಲ್ಲಿರಿಸಿದರು.[೨೭] ನಂತರ ಇಲ್ಲಿನ ಬಾವುಟಗುಡ್ಡೆಯಲ್ಲಿ [೨೮] ಇಂದಿಗೂ ಕಾರ್ಯನಿರ್ವಹಿಸುತ್ತಿರುವ ನ್ಯಾಯಾಲಯದಲ್ಲಿ ಬ್ರಿಟಿಷ್ ದೊರೆಗಳ ಸಮ್ಮುಖದಲ್ಲಿ ವಿಚಾರಣೆ ನಡೆಸಿ, ಮಂಗಳೂರಿನ ಬಿಕರ್ನಕಟ್ಟೆಯಲ್ಲಿ ಗಲ್ಲಿಗೇರಿಸಲಾಯಿತು.

ಹೀಗೆ ಗಲ್ಲಿಗೇರಿಸಲ್ಪಟ್ಟವರಲ್ಲಿ ಕಲ್ಯಾಣಪ್ಪನ ಬಹುತೇಕ ಆಪ್ತರೂ ಸೇರಿದ್ದರೆಂಬುವ ಅಭಿಪ್ರಾಯವಿದೆ. ಗಲ್ಲಿಗೇರಿಸಲಾದ ಅಪರಾಧಿಗಳ ಶವವನ್ನು ಗಲ್ಲು

ಪೀಠದ ಮುಂದಿದ್ದ ಒಂದು ಕಟ್ಟೆಯ ಮರದ ಮೇಲಿರಿಸಿ, ಹದ್ದು ಕಾಗೆಗಳಿಗೆ ಆಹಾರವಾಗಿಸುತ್ತಿದ್ದರು. ಇಂತಹ ಭೀಕರತೆಯನ್ನು ಮೆರೆಯುತ್ತಿದ್ದ ಕಟ್ಟೆ ಅದಾಗಿದ್ದ ಕಾರಣ, ಆ ಪ್ರದೇಶಕ್ಕೆ 'ಭೀಕರನ ಕಟ್ಟೆ' ಎಂದು ಹೆಸರಾಗಿತ್ತು. ಕಾಲಕ್ರಮೇಣ ಜನ ಬಳಕೆಯಲ್ಲಿ 'ಬಿಕರ್ನಕಟ್ಟೆ'ಯಾಗಿ ಇಂದಿಗೆ ರೂಢಿಯಾಯಿತು ಎಂಬ ಐತಿಹ್ಯವೂ ಇದೆ. [೨೯]

ಕಲ್ಯಾಣಪ್ಪನಿಗೂ ಇದೇ ರೀತಿ ವಿಚಾರಣೆ ನಡೆದು, ಮಂಗಳೂರಿನಲ್ಲೇ ಗಲ್ಲಿಗೇರಿಸಲಾಯಿತು ಎಂಬ ಮಾಹಿತಿ ಇದ್ದರೂ, ಯಾವ ಸ್ಥಳದಲ್ಲಿ ಎಂಬುದರ ಬಗ್ಗೆ ವಿದ್ವಾಂಸರಲ್ಲೂ ಭಿನ್ನಾಭಿಪ್ರಾಯವಿದೆ. ಈ ಕುರಿತ ಯಾವುದೇ ಆಧಾರಗಳೂ ಅಲಭ್ಯವೆನ್ನಬಹುದು. ಆದರೂ ಆ ಸಂದರ್ಭದಲ್ಲಿ ಗಲ್ಲುಶಿಕ್ಷೆ ಬಿಕರ್ನಕಟ್ಟೆಯಲ್ಲೇ ಎಲ್ಲಾ 'ಅಪರಾಧಿ'ಗಳಿಗೂ ವಿಧಿಸುತ್ತಿದ್ದರಿಂದ ಕಲ್ಯಾಣಪ್ಪನಿಗೂ ಅಲ್ಲೇ ಅಂತ್ಯ ಪ್ರಾಪ್ತಿಯಾಯಿತೆಂದು ಊಹಿಸಬಹುದು. ಕೆಲವು ಆಧಾರದ ಪ್ರಕಾರ ರಾಜ ಲಕ್ಷ್ಮಪ್ಪರಸನ ಜೊತೆಯಲ್ಲಿಯೇ ಕಲ್ಯಾಣಪ್ಪನಿಗೂ ಗಲ್ಲು ವಿಧಿಸಲಾಯಿತು ಎಂಬ ಉಲ್ಲೇಖಗಳಿವೆ.

೧೮೩೭ರ ರೈತದಂಗೆಯಲ್ಲಿ 'ಕಲ್ಯಾಣಸ್ವಾಮಿ'ಯ ಹೆಸರು ಪ್ರಮುಖವಾಗಿ ಕೇಳಿಬರುತ್ತದೆಯಾದರೂ, ಇಡೀ ಹೋರಾಟದ ಯಶಸ್ವಿಯ ಕೀರ್ತಿ ಸಲ್ಲುವುದು ಹುಲಿ ಕಡಿದ ನಂಜಯ್ಯನಿಗೇ. ಏಕೆಂದರೆ ಕಲ್ಯಾಣ ಸ್ವಾಮಿ ಹುಟ್ಟು ಹೋರಾಟಗಾರನಲ್ಲ. ಅಪ್ರತಿಮ ಸಾಹಸಿ ಎನ್ನುವಂತಹ ವೈಯಕ್ತಿಕ ವರ್ಚಸ್ಸು ಅವನಿಗೆ ಸಹಜವಾಗಿ ಬಂದದ್ದಲ್ಲ. ಅದು ಅವನಿಗೊದಗಿದ ತರಬೇತಿಯ ಫಲ. 'ಕಲ್ಯಾಣಸ್ವಾಮಿ' ಮತ್ತು 'ಕಲ್ಯಾಣ ಬಸವ' ಎಂಬೆರಡು ವ್ಯಕ್ತಿತ್ವಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸ್ವತಃ ಕಲ್ಯಾಣಪ್ಪ ಮತ್ತು ಇತರರು ಅವನ ಹೆಸರಿನಲ್ಲಿ ಮಾಡಿರುವ ಸಾಧನೆಗಳು, ಮೆರೆದಿರುವ ಕ್ಷಾತ್ರಗುಣ ಸಲ್ಲುವುದು ಏಕಮಾತ್ರ ಉದ್ದೇಶಕ್ಕೆ. ಹಾಗಾಗಿ ಇವೆರಡು ಪಾತ್ರ ಒಂದೇ ಗುರಿಯತ್ತ ಸಂಚಾರ ಮಾಡುತ್ತದೆ ಎನ್ನಬಹುದು ಸ್ವಾಮಿ ಅಪರಂಪಾರನು ಜಂಗಮ ವೇಷವನ್ನು ಧರಿಸಿ ಕ್ರಾಂತಿಗೆ ಶಕ್ತಿ ನೀಡಿದಂತೆ, ಕಲ್ಯಾಣಸ್ವಾಮಿ ವೇಷಧಾರಿಗಳೂ ಈ ದಂಗೆಯ ಸಾಫಲ್ಯದಲ್ಲಿ ಬಹಳ ಪ್ರಭಾವೀ ಬಲಗಳಾಗುತ್ತಾರೆ. ಧಾರ್ಮಿಕ ಹಿನ್ನೆಲೆ ಇರುವ ವೇಷ ಇದಾದ ಕಾರಣ ಅವರಿಗೆ ಜನಸಾಮಾನ್ಯರ ನಂಬಿಕೆ–ಶ್ರದ್ಧೆಗಳು ಸುಲಭವಾಗಿ ಲಭ್ಯವಾಯಿತು. ಇವರ ಅನುಯಾಯಿಗಳಾಗಿ ದೊಡ್ಡದೊಂದು ಪಡೆಯೇ ನಿರ್ಮಾಣವಾಯಿತು. ಇದು ಬರಿಯ ಪುಂಡ ಪೋಕರಿಗಳ ಗುಂಪಾಗದೆ, ಪ್ರತಿಷ್ಠಿತರು, ಸದಭಿರುಚಿಯ ದೇಶಭಕ್ತರು ಸೇರಿಕೊಂಡಿರುವ ಸೈನ್ಯವಾಗಿತ್ತು. ಇದು ಭಾರತದ ಸ್ವಾತಂತ್ರ್ಯಯ ಸಂಗ್ರಾಮದ ಮೊದಲ ಆಂದೋಲನ.

ಆದರೆ, ಈ ರೀತಿಯ ಸಿದ್ಧಿ–ಪ್ರಸಿದ್ಧಿಗಳು ಈ ಸಶಕ್ತ ರೈತ ದಂಗೆಗೆ ಪ್ರಾಪ್ತವಾಗದಿರುವುದು ವಿಷಾದವೆನ್ನಬೇಕು. ಈ ಐತಿಹಾಸಿಕ ಘಟನೆ ಕೇವಲ ಸ್ಥಳೀಯ ಚರಿತ್ರೆ ಮಾತ್ರವಲ್ಲ ರಾಷ್ಟ್ರೀಯ ಚರಿತ್ರೆ ರಚನೆಗೂ ನಾಂದಿಯಾಗಬೇಕಿತ್ತು. ಅಲ್ಲದೆ, ಪ್ರಸ್ತುತ ಕಲ್ಯಾಣಸ್ವಾಮಿಯ ಚರಿತ್ರೆ ಒಂದು ಸ್ಥಳೀಯ ಚರಿತ್ರೆಯಾಗಿ ವ್ಯಾಪ್ತಿ ಪಡೆಯುವುದಕ್ಕೆ ಈ ಕೆಳಗಿನ ಕಾರಣಗಳನ್ನು ನೀಡಬಹುದು.

೧. ಕಲ್ಯಾಣಸ್ವಾಮಿ ದೇಸೀ ಪ್ರಭುತ್ವದಿಂದ ತರಬೇತಿ ಪಡೆದ ಹೋರಾಟಗಾರ. ಈತನದ್ದು ಕ್ರಾಂತಿಕಾರಿ ಮಾರ್ಗ. ಬ್ರಿಟಿಷರ ಆಗಮನ ಮತ್ತು ಅಧಿಕಾರ ಸ್ಥಾಪನೆಯ ಪ್ರಾರಂಭದಲ್ಲೇ ಪ್ರತಿರೋಧವನ್ನು ಒಡ್ಡಿರುವ ಕಾರಣ ಆ ಕಾಲದಲ್ಲಿದ್ದ ರಾಷ್ಟ್ರ ಜಾಗೃತಿ ಮತ್ತು ಸ್ವಾಭಿಮಾನದ ಎಚ್ಚರವನ್ನು ಗಮನಿಸಬಹುದು.

೨. ಬ್ರಿಟಿಷರ ಆಗಮನ ಕಾಲದಲ್ಲಿಯೇ ಅವರಿಗೆ ಎದುರಾಗಿ ನಿಂತ ಕಲ್ಯಾಣಸ್ವಾಮಿಯ ಸಮೂಹದ ಹೋರಾಟ ಆ ಬಳಿಕ ಹುಟ್ಟಿಕೊಂಡ ಎಲ್ಲಾ ರಾಷ್ಟ್ರಾಂದೋಲನಕ್ಕೆ ಮುಖ್ಯ ಪ್ರೇರಣೆ ಮತ್ತು ಮಾದರಿಯಾಯಿತು.

೩. ಬೋಪು ದಿವಾನನಂತೆ ಕಲ್ಯಾಣಸ್ವಾಮಿಗೂ ವಸಾಹತುಶಾಹಿಗಳ ಪರವಾಗಿ ನಿಂತು ಸ್ವಲಾಭ ಪಡೆಯಬಹುದಾದ ಅವಕಾಶಗಳು ಹೇರಳವಾಗಿತ್ತು. ಆದರೆ, ಅವನು/ರು ಯಾವುದೇ ಆಮಿಷಗಳಿಗೆ ಬಲಿಯಾಗದೆ ತನ್ನ ನೆಲದ ಸ್ವಾತಂತ್ರ್ಯಕ್ಕಾಗಿ ಟೊಂಕ ಕಟ್ಟಿ ನಿಂತದ್ದು ಗಮನಾರ್ಹ.

೪. ಕಲ್ಯಾಣಸ್ವಾಮಿಯ ಹೋರಾಟದ ಪ್ರಾರಂಭ ಮತ್ತು ಸಂಚಾರಗಳು ಆಯಾ ಪ್ರಾದೇಶಿಕ ವೈಶಿಷ್ಟ್ಯ, ಸಾಮಾಜಿಕ ಪರಿಸ್ಥಿತಿ, ಜನ ಚಿಂತನಾ ಕ್ರಮ, ಜೀವನ ಕ್ರಮ, ಸ್ಪಂದನೆ–ಪ್ರತಿಸ್ಪಂದನೆ, ಕ್ರಿಯೆ–ಪ್ರತಿಕ್ರಿಯೆಗಳನ್ನು ತಂತಾನೇ ದಾಖಲಿಸುತ್ತಾ ಹೋಗುತ್ತದೆ. ಚರಿತ್ರೆ ಎಂದರೆ ಒಂದು ಕಾಲದ ಜನಜೀವನ ಕ್ರಮ ಎನ್ನುವುದಾದರೆ, ಈ ಕಲ್ಯಾಣಸ್ವಾಮಿಯ ಕದನ ಚರಿತ್ರೆಯು ಆ ಪ್ರದೇಶಗಳ ಸ್ಥಳೀಯ ಚರಿತ್ರೆಯ ಆಧಾರ ಎನ್ನುವುದರಲ್ಲಿ ಶಂಕೆಯಿಲ್ಲ.

ಹೀಗಿದ್ದರೂ ರಾಷ್ಟ್ರವ್ಯಾಪ್ತಿಯಲ್ಲಿ ಈ ಚಾರಿತ್ರಿಕ ದಾಖಲೆಗಳು ಗಣನೆಗೆ ದಕ್ಕದ್ದು ಒಂದು ದುರಂತ. ವಸಾಹತುಶಾಹಿಗಳಿಂದ ಸ್ವಾತಂತ್ರ್ಯವನ್ನು ಪಡೆದುಕೊಳ್ಳಲು ನಡೆದ ಮೊದಲ ಪ್ರಯತ್ನವಾಗಿ ಈ ಘಟನಾವಳಿ ಉಲ್ಲೇಖಾರ್ಹವಾಗುತ್ತದೆ.

ರಾಷ್ಟ್ರ ಚರಿತ್ರೆಯನ್ನು ಕಟ್ಟುವಲ್ಲಿ ಕಲ್ಯಾಣಸ್ವಾಮಿ ಹೋರಾಟದ ಈ ವಿದ್ಯಮಾನಗಳು ಮೂಲ ಭೂಮಿಕೆಯಾಗಿ ಕಾಣದಿರಲು ಈ ಕೆಳಗಿನ ಕಾರಣಗಳನ್ನು ಅಂದಾಜಿಸಬಹುದು.

೧. 'ಕಲ್ಯಾಣಸ್ವಾಮಿ' ಮತ್ತು ಆತನ ಗುಂಪಿನ ಜನರಲ್ಲಿ ಯಾರೂ ಕೂಡಾ ಅಧಿಕಾರ, ಶ್ರೀಮಂತಿಕೆ, ಧಾರ್ಮಿಕ ಹಿನ್ನೆಲೆ, ಜಾತಿ, ಪ್ರತಿಷ್ಠೆ, ಮುಂತಾದ ನೆಲೆಗಳಲ್ಲಿ ಪ್ರಮುಖರಲ್ಲ. ಅವರೆಲ್ಲರೂ ಸಾಮಾನ್ಯ ಶ್ರಮಿಕ ರೈತಾಪಿ ವರ್ಗ. ಬದುಕನ್ನೊಂದು ಹೊರತು ಪಡಿಸಿ ಇನ್ನಾವುದನ್ನೂ ಸಾಧನೆ ಎಂದು ಮೆರೆದವರಲ್ಲ. ಹಾಗಾಗಿ ಅವರ ಬದುಕೇ ಒಂದು ಹೋರಾಟವಾಯಿತು. ಆದರೆ, ಆ ಹೋರಾಟದ ಬದುಕಿಗೆ ಅರಸನೊಬ್ಬನ ರಾಜಕೀಯ ವಿಜಯಕ್ಕೆ ದೊರೆಯುವ ಪ್ರಚಾರ-ಪ್ರಸಾರ, ಮುಖ್ಯತೆ ಇವ್ಯಾವುದೂ ಒದಗಲಿಲ್ಲ.

೨. ಕಲ್ಯಾಣಸ್ವಾಮಿಯ ಗುಂಪು ವಸಾಹತುಶಾಹಿಗಳ ದ್ವೇಷ ಕಟ್ಟಿಕೊಂಡು, ಅವರ ವಿರುದ್ಧವೇ ಸಮರ ಸಾರಿದ ಕಾರಣ, ಅಂದಿನ ಬ್ರಿಟಿಷ್ ಪ್ರಭಾವಿತ ದೇಶದ ವಾತಾವರಣ, ಇವರ ಸಾಹಸಗಳನ್ನು ಪ್ರಮುಖವೆಂದು ಪರಿಗಣಿಸಲೇ ಇಲ್ಲ. ಮಾನಸಿಕ, ಬೌದ್ಧಿಕ ಮತ್ತು ಸಾಂಸ್ಕೃತಿಕವಾಗಿ ವಸಾಹತುಶಾಹಿಗಳನ್ನೇ ಒಪ್ಪಲಾರಂಬಿಸಿದ್ದ ಅಂದಿನ ಸಮಾಜಕ್ಕೆ ಇವರ ಹೋರಾಟಗಳೆಲ್ಲವೂ ಯಾವುದೇ ಒಂದು ತಿರುಳಿಲ್ಲದ 'ಕಾಟ್‌ಕಾಯಿ'ಯಂತೆ ಭಾಸವಾಗಿತ್ತು.

೩. ಆ ಕಾಲದಲ್ಲಿ ಸುಶಿಕ್ಷಿತರೆನೆಸಿಕೊಂಡವರೆಲ್ಲರೂ ಬ್ರಿಟಿಷರ ಇಂಗ್ಲೀಷ್ ಶಿಕ್ಷಣದಿಂದ ಬಹಳಷ್ಟು ಪ್ರಭಾವಿತರಾಗಿದ್ದವರು. ಆ ಮೂಲಕ ವಿವಿಧ ಆಮಿಷಗಳಿಗೆ ಸುಲಭವಾಗಿ ಬಲಿಯಾಗಿದ್ದರು. ಆದರಿಂದಲೇ, ಅಂದಿನ ಅಕ್ಷರಸ್ಥ ಇತಿಹಾಸಕಾರರು ವಸಾಹತುಶಾಹಿಗಳಿಗೆ ಪರವಾದ ಧೋರಣೆಯನ್ನಿಟ್ಟುಕೊಂಡು ಚರಿತ್ರೆಯನ್ನು ಸಂರಚಿಸಿದರು. ಹಾಗಾಗಿ ಕಲ್ಯಾಣಪ್ಪನ ಚರಿತ್ರೆ ಎಂಬುದು ಇಲ್ಲಿನ ಸ್ಥಳೀಯ ಚರಿತ್ರೆಯಲ್ಲಿ ದಾಖಲಾಗಲೇ ಇಲ್ಲ. ಕೆಲವೆಡೆ ಆಂಶಿಕವಾಗಿ ದಾಖಲಾದರೂ ಅದು ಕಪೋಲಕಲ್ಪಿತ ಕಟ್ಟುಕತೆಯಾಗಿದೆಯೇ ವಿನಾ ಸತ್ಯವರದಿಯಲ್ಲ.

೪. ಇನ್ನೊಂದು ವಿಚಿತ್ರ ಕಾರಣವೇನೆಂದರೆ, ರಾಷ್ಟ್ರ ಸಂಗ್ರಾಮದಲ್ಲಿ ದಕ್ಷಿಣ ಕರ್ನಾಟಕ ಭಾಗದ ಚಟುವಟಿಕೆಗಳಿಗೆ ತೋರಿದ ನಿರ್ಲಕ್ಷ್ಯ. ಭಾರತದ ದಕ್ಷಿಣ ಭಾಗದಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟಗಳೆಲ್ಲವೂ ನಮ್ಮ ರಾಷ್ಟ್ರ ಚರಿತ್ರೆಯಲ್ಲಿ ಅಲಕ್ಷ್ಯಕ್ಕೆ ಒಳಗಾಗಿರುವುದು ಸತ್ಯ. ಇದಕ್ಕೆ ವೀರ ರಾಣಿ ಅಬ್ಬಕ್ಕಳ ಹೋರಾಟವೇ ಪ್ರತ್ಯಕ್ಷ ಉದಾಹರಣೆ. ಭಾರತದ ಪ್ರಥಮ ಸ್ವಾತಂತ್ರ್ಯ ಹೋರಾಟಗಾರ್ತಿ ಎಂಬ ಕೀರ್ತಿ ಇವಳಿಗೆ ಸಲ್ಲಬೇಕಾದದ್ದಾದರೂ ಅದು ಉತ್ತರ ಕರ್ನಾಟಕದ ಕಿತ್ತೂರು ರಾಣಿ ಚೆನ್ನಮ್ಮಳಿಗೆ ಪ್ರಾಪ್ತಗೊಂಡಿರುವುದನ್ನು ಗಮನಿಸಬಹುದು. ಇದೇ ರೀತಿ ಟಿಪ್ಪು ಸುಲ್ತಾನ್, ಕಾರ್ನಾಡ್ ಸದಾಶಿವ ರಾಯರು, ಉಳ್ಳಾಲ ಶ್ರೀನಿವಾಸರಾಯರು, ಕುದ್ಮಾಲ್ ರಂಗರಾವ್, ತಗಡೂರು ರಾಮಚಂದ್ರರಾವ್, ಕೆ.ಟಿ. ಬಾಷ್ಯಮ್, ಹೆಚ್.ಸಿ.ದಾಸಪ್ಪ, ಹೊಸಕೊಪ್ಪ ಕೃಷ್ಣರಾವ್, ಹೆಚ್.ಕೆ. ವೀರಣ್ಣ ಗೌಡ, ಎಸ್. ಅಣ್ಣಪ್ಪ ಶೆಟ್ಟಿ, ನಾರಾಯಣ

ಶೆಟ್ಟಿ ಕಿಲ್ಲೆ, ಕಮಲಾದೇವಿ ಚಟ್ಟೋಪಾಧ್ಯಾಯ, ಒರಿಯಡ್ಕ ರಾಮರಾಯ ಮಲ್ಯ, ಅತ್ತಾವರ ಎಲ್ಲಪ್ಪ ಮುಂತಾದವರ ಹೋರಾಟವು ಈ ವಿಷಯಕ್ಕೆ ಕೆಲವಾರು ನಿದರ್ಶನಗಳಾಗಿವೆ.

೫. ೧೮೩೭ರ ರೈತದಂಗೆಯನ್ನು ಬ್ರಿಟಿಷರ ವಿರುದ್ಧವೇ ಕೈಗೊಂಡಿದ್ದರೂ, ಅದು ಭಾರತದ ಸ್ವಾತಂತ್ರ್ಯ ಸಂಗ್ರಾಮದ ಭಾಗವಾಗಿ ಪರಿಗಣನೆಗೆ ದಕ್ಕಲಿಲ್ಲ. ಅದು ರೈತರು ತಮ್ಮ ಬೆಳೆಯ ಮೇಲಿನ ಕಂದಾಯದ ವಿರುದ್ಧ ಮಾಡಿದ ಸಣ್ಣ ಪ್ರಮಾಣದ ಪ್ರತಿಭಟನೆ ಎಂಬಂತೆ ಬಿಂಬಿತಗೊಂಡಿದೆ. ಬಹುತೇಕ ಇತಿಹಾಸಕಾರರ ಪ್ರಕಾರ ಅದು ಪ್ರಾದೇಶಿಕವಾಗಿ ನಡೆದ ಒಂದು ಚಳುವಳಿಯೇ ಹೊರತು ಸ್ವಾತಂತ್ರ್ಯ ಸಂಗ್ರಾಮದ ಒಂದು ಕವಲಲ್ಲ. ಹಾಗಾಗಿ ಅದು 'ಕಲ್ಯಾಣಪ್ಪನದ್ದೇ ಕಾಟ್‌ಕಾಯಿ' ಎಂಬಂತೆ ಪ್ರಚಾರವಾಯಿತು. ಈ ಬಂಡಾಯದಲ್ಲಿ ಪಾಲ್ಗೊಂಡ ಹೋರಾಟಗಾರರನ್ನು ಬಂಧಿಸಿ ಕೊಟ್ಟವರಿಗೆ ಬಹುಮೊತ್ತದ ಬಹುಮಾನಗಳನ್ನು ಘೋಷಿಸಿರುವುದು ಬಂಡಾಯದ ಗಂಭೀರತೆಗೆ ಇನ್ನೊಂದು ಸಾಕ್ಷಿ.

೬. ಈ ಹೋರಾಟದ ವ್ಯಾಪ್ತಿ ಮೈಸೂರಿನಿಂದ ತೊಡಗಿ ಕುಂಬಳೆ ಸೀಮೆಯವರೆಗೆ ಮಾತ್ರ ಗುರುತಿಸಿಕೊಳ್ಳುವುದರಿಂದ ಇದೊಂದು ಪ್ರಾದೇಶಿಕ ಆಂದೋಲನವಾಗಿಯಷ್ಟೇ ಖ್ಯಾತಿ ಪಡೆಯಿತು. ಹಾಗಾಗಿ ಸ್ಥಳೀಯ ಚರಿತ್ರೆ ರಚನೆ ಮಾತ್ರಕ್ಕೆ ಆಧಾರವಾಗಿ ಕಾಣಿಸಿತು. ಹೀಗಿದ್ದರೂ, ಸ್ಥಳೀಯವಾಗಿಯೂ ಈ ಚರಿತ್ರಾರ್ಹ ಸಂಗಂತಿಗಳನ್ನು ಕಡೆಗಣಿಸಿರುವುದನ್ನು ಕಾಣಬಹುದು.



೭. ಕಲ್ಯಾಣಸ್ವಾಮಿಯೂ ಸೇರಿದಂತೆ ಅವನ ಗುಂಪಿನ ಯಾರೊಬ್ಬರೂ ರಾಜ ವಂಶಸ್ಥರೂ ಅಲ್ಲ, ಯಾವ ರಾಜಕೀಯ ನಾಯಕರೂ ಅಲ್ಲ, ಧಾರ್ಮಿಕ ಹಿನ್ನೆಲೆಯುಳ್ಳವರೂ ಅಲ್ಲ. ಹಾಗಾಗಿ, ಸಮಾಜ ಅವರ ಹೋರಾಟಗಳನ್ನು ಕಣ್ಣೆತ್ತಿಯೂ ನೋಡಲಿಲ್ಲ. ಇದು ತಳ ಸಮುದಾಯದ ಸಂಗ್ರಾಮವಾಗಿ 'ಸಬಾಲ್ಟರ್ನ್ ಓದಿ'ಗೆ ಒಂದು ಮಾದರಿಯಾಗಿರುವುದೇ ಈ ಅವಗಣನೆಗೆ ಕಾರಣ.

೮. ಕಲ್ಯಾಣಸ್ವಾಮಿಯ ಹೋರಾಟಗಳಿಗೆ ಸಂಬಂಧಿತ ಆಧಾರಗಳ ಕೊರತೆ. ಕೆಲವೆಡೆ ಕಂಡುಬಂದರೂ ಅದರ ನಿರ್ವಹಣೆ ಸಮರ್ಪಕವಾಗಿಲ್ಲ. ಇನ್ನು ಕೆಲವು ಸಂಶೋಧನೆಯಿಂದಷ್ಟೇ ಬೆಳಕಿಗೆ ಬರಬೇಕಾಗಿದೆ. ಉದಾ: ಅರಕಲಗೂಡಿನ ಹುಲಿಕಡಿದ ನಂಜಯ್ಯನ ಮನೆ.

**ಟಿಪ್ಪಣಿಗಳು : –**

೧) ಶೈಲಾ ಯು. ಪ್ರಾದೇಶಿಕತೆಯೂ ಕಲ್ಲು ಹೇಳುವ ಕಥೆಗಳು ಪುಟ ೫.

೨) ಮಡಿಕೇರಿ ಮತ್ತು ಸುಳ್ಯ ಸುತ್ತಮುತ್ತಲ ಪರಿಸರದಲ್ಲಿ ಕಲ್ಯಾಣಪ್ಪನ ಬಗ್ಗೆ ಬಲ್ಲ ವಕ್ತೃಗಳೆನ್ನಲಾದವರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತೋರಿದ ಸಮಸ್ಯೆ. 'ಕಲ್ಯಾಣಪ್ಪನ ಬಗ್ಗೆ ಹಿಂದೆ ಕೇಳಿದ್ದಿದೆ ಈಗ ನೆನಪಿಲ್ಲ'. ಎಂದು ವಕ್ತೃಗಳು ಅಭಿಪ್ರಾಯ ಪಡುತ್ತಾರೆ.

೩) ನಿರಂಜನ, ಕಲ್ಯಾಣಸ್ವಾಮಿ, ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೫೬, ಪುಟ ೧೯೦

೪) ನಿರಂಜನರ ಉಲ್ಲೇಖ, ಕಲ್ಯಾಣಸ್ವಾಮಿ, ಪುಟ ೧೯೦

೫) ರಿಕ್ತರ್, ಕರ್ನಾಟಕ ಗೆಜೆಟಿಯರ್, ೧೯೮೩, ಪುಟ ೨೩೧,೨೩೨

೬) ಜನಾರ್ದನ ಕಣಕ್ಕೂರು (ಲೇ):ಎನ್.ಎನ್. ದೇವಿಪ್ರಸಾದ್ ಸಂಪಾಜೆ (ಸಂ) ಕೊಡಗಿನಲ್ಲಿ ಭಾಷಾ ಸಾಂಸ್ಕೃತಿಕ ಸಾಮರಸ್ಯ, ಅಮರ ಕ್ರಾಂತಿ ಉತ್ಸವ ಸಮಿತಿ ಸುಳ್ಯ, ದ.ಕ. ೨೦೦೩, ಪುಟ ೭೫

೭) ಬಾಚರಣೆಯಂಡ ಅಪ್ಪಣ್ಣ (ಲೇ) ಕೊಡಗಿನಲ್ಲಿ ಭಾಷಾ ಸಾಂಸ್ಕೃತಿಕ ಸಾಮರಸ್ಯ, ೨೦೦೨, ಪುಟ ೫೭

೮) ಅದೇ, ಪುಟ ೫೭

೯) ಉದಯವರ್ಮರಾಜ, ತುಳುನಾಡಿನ ಗತವೈಭವ, ಕನ್ನಡ ಸಾಹಿತ್ಯ ಪರಿಷತ್ತು, ಕೇರಳ ವಿಶೇಷ ಘಟಕ, ಕಾಸರಗೋಡು ೧೯೯೮, ಪುಟ ೮೦

೧೦) ಅದೇ, ಪುಟ ೮೧

೧೧) ಕೇಶವ ಕೃಷ್ಣ ಕುಡ್ವ, ಪೂರ್ವೋಕ್ತ, ೧೯೪೮, ಪುಟ ೧೯

೧೨) ಪ್ರತಿಮಾ. ಪಿ.ಎಸ್. ಮಹಾಪ್ರಬಂಧದ ನಿರೂಪಣೆ

೧೩) ದೇಸಾಯಿ.ಎ.ಆರ್.(ಸಂ.) ಭಾರತದಲ್ಲಿ ರೈತರ ಹೋರಾಟಗಳು, ವಿ.ವಿ.ಮುದ್ರಣಾಲಯ, ನವದೆಹಲಿ ೧೯೮೫, ಪುಟ ೯೪

೧೪) Ibid, P 112 (ಉದ್ಧೃತ) ಪ್ರತಿಮಾ.ಪಿ.ಎಸ್.

೧೫) ನಿರಂಜನ, ಸ್ವಾಮಿ ಅಪರಂಪಾರ, ಕಥಾ ಸಾಹಿತ್ಯ, ಬೆಂಗಳೂರು, ೧೯೮೮.

೧೬) ಪ್ರತಿಮಾ.ಪಿ.ಎಸ್, ಪುಟ ೨೦೩

೧೭) ಅದೇ ಪುಟ ೧೯೮

೧೮) ಸಾವಿತ್ರಿ .ಕೆ, ನಂಬಿದ ಸತ್ಯಗಳು (ಪಿ.ಎಚ್.ಡಿ. ಪ್ರಬಂಧ) ಕೆ.ಎಸ್.ಮುದ್ದಣ್ಣ ಸ್ಮಾರಕ ಟ್ರಸ್ಟ್, ಕೃಷ್ಣಾಪುರ ದೊಡ್ಡಿ ೨೦೦೬, ಪುಟ ೪

೧೯) ಶೈಲಾ ಪ್ರಾದೇಶಿಕತೆಯೂ ಕಲ್ಲು ಹೇಳುವ ಕಥೆಗಳೂ, ಪುಟ ೮

೨೦) ಅದೇ, ಪುಟ ೬

೨೧) ಉದಯವರ್ಮರಾಜ, ತುಳುನಾಡಿನ ಗತವೈಭವ, ಪುಟ ೮೪

೨೨) ಅದೇ, ಪುಟ ೮೪

೨೩) ನಿರಂಜನರಿಗೆ ಗೋಪಿಂದ ಪೈಗಳು ಬರೆದ ಪತ್ರ, ಕಲ್ಯಾಣಸ್ವಾಮಿ. ೨೦೦೫. ಪುಟ ೧೯೨

೨೪) ಕಲ್ಯಾಣಸ್ವಾಮಿಗೆ ಸಹಾಯ ಕೊಡುವ ಉದ್ದೇಶದಿಂದ ತೆಂಕುಂಬಳೆಯ ಸುಬ್ರಾಯ ಹೆಗ್ಡೆ ತನ್ನ ಜನರೊಂದಿಗೆ ಮಂಗಳೂರು ಕಡೆಗೆ ಧಾವಿಸಿದನು. ಆದರೆ, ಈ ಆಕ್ರಮಣಗಳನ್ನು ಎದುರಿಸಲು ಬ್ರಿಟಿಷರು ತಲಚೇರಿಯಿಂದ ಸೈನ್ಯವನ್ನು ತಂದು ಮೊದಲೇ ಸಿದ್ಧರಾಗಿದ್ದರು. ಮಂಗಳೂರಿನ ಬೋಳಾರದ ಸಮೀಪ ಸುಬ್ರಾಯನ ದಂಡನ್ನು ಎದುರಿನಿಂದ ಇಂಗ್ಲಿಷ್ ಸೈನಿಕರು ಅವನನ್ನು ಮತ್ತು ಅವನ ಜನರನ್ನು ಬೋಳಾರದಲ್ಲಿಯೇ ಜಲಸಮಾಧಿ ಮಾಡಿಬಿಟ್ಟರು.

೨೫) 'ಕೊತ್ತಳಿಂಗೆ' ಎಂದರೆ ತುಳುವಿನಲ್ಲಿ ತೆಂಗಿನ ಮಡಲಿನ ತಳಭಾಗ, ಮಕ್ಕಳಾಟಿಕೆಯ ಅಣಕು ಆಯುಧವಾಗಿ ಅದು ಪ್ರಸಿದ್ಧ.

೨೬) ಪ್ರತಿಮಾ ಪಿ.ಎಸ್. ಪುಟ ೨೧೬

೨೭) ಮಂಗಳೂರಿನಲ್ಲಿ ಇದೇ ಜೈಲು ಇಂದಿಗೂ ಕಾರ್ಯನಿರ್ವಹಿಸುತ್ತಿದೆ.

೨೮) ಕಲ್ಯಾಣಸ್ವಾಮಿಗೆ ಈ ಬಾವುಟಗುಡ್ಡೆಯಲ್ಲಿಯೇ ಗಲ್ಲು ವಿಧಿಸಲಾಯಿತು ಎಂಬುದು ಕೆಲವು ವಕ್ತೃಗಳ ಅಭಿಪ್ರಾಯ. ಆದರೆ ಈ ಕುರಿತು ನಡೆದ ಬಹುಪಾಲು ತಳಸ್ಪರ್ಶಿ ಅಧ್ಯಯನಗಳು ಇದು ನಡೆದಿರುವುದು ಬಿಕರ್ನಕಟ್ಟೆಯಲ್ಲಿ ಎಂಬುವುದನ್ನು ದೃಢೀಕರಿಸುತ್ತದೆ.

೨೯) ಪ್ರಭಾಕರ್ ಶಿಶಿಲ ಮತ್ತು ಇತರ ಸಂಶೋಧನಾ ಕೃತಿಗಳ ಅಭಿಪ್ರಾಯಗಳೇ ಈ ಉಲ್ಲೇಖಕ್ಕೆ ಆಧಾರವಾಗಿದೆ. ಆದರೆ, ಪ್ರಸ್ತುತ ಪರಿಸರದಲ್ಲಿ ಯಾವುದೇ ಲಿಖಿತ ಮತ್ತು ಅಲಿಖಿತ ಆಧಾರಗಳು ಇಂದು ಅಲಭ್ಯ.

# ಅಧ್ಯಾಯ – ೪
# ಕಲ್ಯಾಣಸ್ವಾಮಿ ಕಾದಂಬರಿಯಲ್ಲಿ ಪ್ರಭುತ್ವ ಮತ್ತು ಪ್ರಜಾಪ್ರಭುತ್ವದ ನೆಲೆಗಳು

ಸೃಜನಶೀಲ ಲೇಖಕನೊಬ್ಬನು ಸೃಷ್ಟಿಸುವ ಸಾಹಿತ್ಯ ಕೃತಿಯು ಒಂದು ಕಲಾಕೃತಿಯೂ ಆಗಿರುತ್ತದೆ. ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿ ಕಲಾಕೃತಿಯಾಗಿಯೂ ಯಶಸ್ವಿಯಾದ ಕೃತಿ. ಈ ಹಿನ್ನಲೆಯಲ್ಲಿ ಈ ಕಾದಂಬರಿಯಲ್ಲಿ ಪ್ರಭುತ್ವ ಮತ್ತು ಪ್ರಜೆಗಳ ನಡುವಿನ ಸಂಬಂಧದ ಸ್ವರೂಪ ಕಲಾತ್ಮಕವಾಗಿ ಚಿತ್ರಿತವಾದ ಬಗೆಯನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

'ಪ್ರಭುತ್ವ' ಎನ್ನುವುದ ಭಾರತದ ಇತಿಹಾಸ ಗೋಪುರದ ಉತ್ತುಂಗ ಸ್ತರ. ರಾಷ್ಟ್ರದ ನಾಗರಿಕತೆ, ಸಂಸ್ಕೃತಿ, ಧರ್ಮ, ಚಿಂತನಾಕ್ರಮ, ವ್ಯವಸ್ಥೆ, ಆಡಳಿತ, ಅಧಿಕಾರ, ಜನಜೀವನ, ಮೌಲ್ಯಗಳು, ಇವೆಲ್ಲವೂ ಈ ಪ್ರಭುತ್ವ ಕೇಂದ್ರಿತವಾಗಿಯೇ ಬಿಂಬಿತಗೊಳ್ಳುತ್ತಾ ಬಂದಿರುವುದನ್ನು ಗಮನಿಸಿರಬಹುದು. ನಮ್ಮ ಸ್ಥಳೀಯ ಚರಿತ್ರೆಯಿಂದ ತೊಡಗಿ ವಿಶ್ವಚರಿತ್ರೆಯ ವರೆಗೆ ಎಲ್ಲಾ ಇತಿಹಾಸದ ರಚನೆಗಳೂ ಇದೇ ಮಾದರಿಯನ್ನು ಅನುಸರಿಸಿವೆ. ಹಾಗಾಗಿಯೇ ಎಲ್ಲಾ ಚಾರಿತ್ರಿಕ ದಾಖಲೆಗಳಲ್ಲಿ ರಾಜನೇ ಮುಖ್ಯನಾಗುತ್ತಾನೆ, ಘಟನೆಗಳೆಲ್ಲವೂ ಅವನಿಗೆ ಶರಣಾಗಿಯೇ ಜೀವ ಪಡೆಯುತ್ತವೆ. ಅಲ್ಲದೆ, ವಿಶ್ವ–ರಾಷ್ಟ್ರ ಚರಿತ್ರೆಗಳ ಪ್ರಭಾವದಲ್ಲಿ ಸ್ಥಳೀಯ ಚರಿತ್ರೆಗಳು ಗೌಣವಾಗುತ್ತದೆ.

ಕತ್ತಲೆ ಇದ್ದಲ್ಲಿ ಮಾತ್ರ ಬೆಳಕಿಗೆ ಬೆಲೆ ಎನ್ನುವಂತೆ 'ಪ್ರಭುತ್ವ' ಇದ್ದಲ್ಲಿ ಮಾತ್ರ ಜನಪ್ರಭುತ್ವದ ಮಹತ್ವ ಮನವರಿಕೆಯಾಗಬಲ್ಲದು. ಪ್ರಜಾಪ್ರಭುತ್ವ ಭಾರತವೂ ಪ್ರಭುತ್ವವನ್ನು ಪರೋಕ್ಷವಾಗಿ ಪೋಷಿಸುತ್ತಲೇ ಬಂದಿದೆ ಎಂದರೆ ತಪ್ಪಾಗಲಾರದು. ಒಂದು ಸಬಾಲ್ಟರ್ನ್ ಓದಾಗಿ ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿ ಪರಿಗಣಿಸಲ್ಪಟ್ಟರೂ, ಪ್ರಭುತ್ವದ ನಿರಸನವಾದಾಗ ಮಾತ್ರ ಈ ತಳಮಟ್ಟದಿಂದ ಚರಿತ್ರೆ ಕಟ್ಟುವ ಕಾರ್ಯಕ್ಕೆ ಯಶಸ್ಸು ಲಭಿಸಬಹುದು. ಹಾಗಾಗಿ, 'ತಳ' ಎಂದು ಗುರುತಿಸುವ ಮುನ್ನ 'ಶಿರ' ಯಾವುದೆಂಬ ಕಲ್ಪನೆ ಇರಬೇಕಾಗುತ್ತದೆ. 'ಶಿರ' ಭಾಗದಲ್ಲಿ ನಿಂತು ಪ್ರಸ್ತುತ ಸ್ಥಳೀಯ ಚರಿತ್ರೆಯನ್ನು ಅವಲೋಕಿಸಿದಾಗ ಆಗುವ ದರ್ಶನಕ್ಕಿಂತ ತಳ ಭಾಗದಿಂದಾಗುವ ದರ್ಶನಾನುಭವ ವಿಭಿನ್ನವೂ ವಿಶೇಷವೂ ಆಗಿದೆ. ಏಕೆಂದರೆ, ಇದು ಜನಸಾಮಾನ್ಯರ ಸಹಜ ಬದುಕಿನ ನಿರಾಭರಣ ಸೌಂದರ್ಯವನ್ನು ಎಳೆಎಳೆಯಾಗಿ ತೆರೆದಿಡುತ್ತದೆ. ಪ್ರಭುತ್ವ ಕೇಂದ್ರಿತ ಚರಿತ್ರೆಯಲ್ಲಿ ಪ್ರಮುಖ್ಯ ಬರುವುದು

ಅಧಿಕಾರಶಾಹಿಗಳಿಗೆ ಮಾತ್ರ. ಈ ಮೇಲ್‌ಸ್ತರದ ಮನೋಧರ್ಮದಲ್ಲಿ ಎಲ್ಲವೂ ಸರ್ವಾಂಗ ಸುಂದರವಾಗಿ ಕಾಣಬಹುದು, ಸಮಾಜ ನೋವು-ದುಃಖಗಳಲ್ಲದ ವಿಜೃಂಭಿತ ಸ್ಥಿತಿಯಲ್ಲಿ ಗೋಚರವಾಗಬಹುದು. ಆದರೆ, ಇದು ಸತ್ಯ ಪರಿಸ್ಥಿತಿಯ ದರ್ಶನವಾಗಲಾರದು. ಇಲ್ಲಿ ತಳವರ್ಗದ ಜನ ಸಾಮಾನ್ಯರ ಸ್ಥಿತಿ-ಗತಿಗಳಿಗೆ ಒಲವು ಹರಿಯುವುದಿಲ್ಲ. ಆದ್ದರಿಂದ ಈ ಬಗೆಗಿನ ನೋಟ ತೀರಾ ಕೃತಕವೆಂದೆನಿಸಿ, ನೈಜ ಚಿತ್ರಣವನ್ನು ಕಟ್ಟಿಕೊಡುವಲ್ಲಿ ಸೋಲುತ್ತದೆ. ಹಾಗಾಗಿ ಪ್ರಸ್ತುತ ಕಾದಂಬರಿ ಮತ್ತು ಸ್ಥಳೀಯ ಚರಿತ್ರೆಯ ಘಟನಾವಳಿಗಳನ್ನು ಪ್ರಭುತ್ವದ ನೆಲೆಯಲ್ಲಿ ವಿಮರ್ಶಿಸಿ, ಆ ಮೂಲಕ ಸಹಜವಾಗಿ ಹುಟ್ಟುವ ಪ್ರಜಾಪ್ರಭುತ್ವದ ಪ್ರಶ್ನೆಯ ನೆಲೆಯಲ್ಲಿ ಅವಲೋಕಿಸುವ ಪ್ರಯತ್ನ ಮುಖ್ಯವಾಗುತ್ತದೆ.

"ಈ ಪರಿಕಲ್ಪನೆಯ ಪ್ರಕಾರ ಗತಕಾಲದಲ್ಲಿ ಆಗುವುದಕ್ಕೆಲ್ಲಾ ಕಾರಣಗಳಿವೆ. ಮತ್ತು ಆ ಕಾರಣಗಳು ಬೇರೆಯಾಗಿದ್ದರೆ ಪರಿಣಾಮಗಳೂ ಬೇರೆಯಾಗುತ್ತಿದ್ದವು. ಇದೇ ದೃಷ್ಟಿಕೋನದಿಂದ ಆರ್ಥಿಕ ಕಾರ್ಯ-ಕಾರಣ ಸಂಬಂಧಕ್ಕೆ ಒತ್ತು ಕೊಡುತ್ತಾ ಇತಿಹಾಸವನ್ನು ವಿಶ್ಲೇಷಿಸಿದರೆ ಆ ವೈಚಾರಿಕ ಕ್ರಮವನ್ನು 'Marxism' ಅಥವಾ 'Dialectice Determinism' ಎಂದು ಕರೆಯಬಹುದು." [೧]

"ಈ ವಿಧದ ಐತಿಹಾಸಿಕ ಪ್ರಜ್ಞೆಯುಳ್ಳ ಸಾಹಿತಿಯ ಕೃತಿಗಳಲ್ಲಿ ರಾಜ ಪುರುಷರು- ಅಧಿಕಾರಿಗಳು ಕಂಡು ಬಂದರೂ ಒತ್ತು ಬೀಳುವುದು ಆ ಕಾಲದ ಸಾಮಾನ್ಯ ಜನರ ಮೇಲೆ-ಅವರ ಆಶೋತ್ತರಗಳ ಮೇಲೆ ಮತ್ತು ಮುಖ್ಯವಾಗಿ ಅಂದಿನ ಸಮಾಜದ ರಚನೆಯ ಮೇಲೆ. ನಿರಂಜನರ ಯಶಸ್ವೀ ಐತಿಹಾಸಿಕ ಕಾದಂಬರಿಗಳಲ್ಲಿ ಕಂಡು ಬರುವುದು ಈ ವಿಧದ ಐತಿಹಾಸಿಕ ಪ್ರಜ್ಞೆ." [೨]

ನಿರಂಜನರ 'ಚಿರಸ್ಮರಣೆ' (೧೯೫೫) ಎಂಬುದು ಅವರ ಮೊದಲ ಐತಿಹಾಸಿಕ ಕಾದಂಬರಿಯಾಗಿದೆ. ಆನಂತರದಲ್ಲಿ ನಿರಂಜನರು ಮೂರು ಐತಿಹಾಸಿಕ ಕಾದಂಬರಿಯನ್ನು ರಚಿಸಿದ್ದಾರೆ. ೧೯೭೬ರಲ್ಲಿ 'ಕಲ್ಯಾಣಸ್ವಾಮಿ', ೧೯೬೫ರಲ್ಲಿ 'ಸ್ವಾಮಿ ಅಪರಂಪಾರ' ಮತ್ತು ೧೯೭೬ರಲ್ಲಿ 'ಮೃತ್ಯುಂಜಯ'. ಇವುಗಳಲ್ಲಿ 'ಚಿರಸ್ಮರಣೆ', 'ಕಲ್ಯಾಣಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ' ಕೃತಿಗಳ ವಿಷಯ ಮತ್ತು ಶೈಲಿಗಳು 'ಮೃತ್ಯುಂಜಯ'ಕ್ಕಿಂತ ವಿಭಿನ್ನವಾದುವು.

"ಬೂದಿ ಬಸವ ಎಂಬಾತನನ್ನು ಅರಸು ವಂಶಸ್ಥನೆಂದು ಪ್ರಚುರ ಪಡಿಸಿ ೧೮೩೧ರಲ್ಲಿ ಐಗೂರು ಮತ್ತು ತರಿಕೆರೆಯ ಪಾಳೇಗಾರರು ಬಂಡಾಯವೆಬ್ಬಿಸಿದರು. ಇದನ್ನೇ ಕಾರಣ ಮಾಡಿ ಬ್ರಿಟಿಷರು ೨೧-೧೦-೧೮೩೧ರಂದು ಮುಮ್ಮಡಿ ಕೃಷ್ಣರಾಜನನ್ನು ಪದಚ್ಯುತಿಗೊಳಿಸಿದರು. ಆಗ ತೀವ್ರವಾದ ಪ್ರತಿರೋಧ ಕಂಡುಬಾರದ ಕಾರಣ ಬ್ರಿಟಿಷರು ಇನ್ನಷ್ಟು ಪ್ರಬಲರಾದರು. ೧೫-೦೩-೧೮೩೪ರಂದು ಕೊಡಗಿನ

ಚಿಕ್ಕವೀರ ರಾಜನನ್ನು ಪದಚ್ಯುತಿಗೊಳಿಸಲಾಯಿತು. ಇವೆರಡು ಘಟನೆಗಳು ಮೈಸೂರಿನ ಮತ್ತು ಮಲೆನಾಡಿನ ಜನರ ಆಕ್ರೋಶಕ್ಕೆ ಕಾರಣವಾಯಿತು. ೧೮೩೭ರಲ್ಲಿ ಅದು ಕ್ರಾಂತಿಯ ರೂಪದಲ್ಲಿ ಕಾಣಿಸಿಕೊಂಡಿತು."[೩]

'ಕಲ್ಯಾಣಸ್ವಾಮಿ' ಕಾದಂಬರಿಯ ಐತಿಹಾಸಿಕ ಹಿನ್ನೆಲೆ ಭಾರತವು ಬ್ರಿಟಿಷರ ದಾಸ್ಯದ ನೊಗವನ್ನು ದೂರ ಮಾಡಲು ಯತ್ನಿಸುತ್ತಿದ್ದು ಈ ಕಾಲ,. ಕೊಡಗು ಪ್ರಾಂತ್ಯ ಚಿಕ್ಕವೀರ ರಾಜೇಂದ್ರನ ಕಾಲದಲ್ಲಿ ಬ್ರಿಟಿಷರ ಅಧೀನಕ್ಕೆ ಬಂದುದು ಮತ್ತು ಆ ಪ್ರಾಂತ್ಯವನ್ನು ಬ್ರಿಟಿಷರಿಂದ ಮರಳಿ ಪಡೆಯಲು ಕಲ್ಯಾಣಸ್ವಾಮಿ ನಡೆಸಿದ ಹೋರಾಟ ಈ ಕಾದಂಬರಿಯಲ್ಲಿ ಮುಖ್ಯ ವಸ್ತು.

ನಿರಂಜನರು ಈ ಕಾದಂಬರಿ ರಚನೆಗಾಗಿ ಕೆಲವಾರು ಐತಿಹಾಸಿಕ ದಾಖಲೆಗಳನ್ನು ಪರಾಮರ್ಶಿಸಿದ್ದಾರೆ. ಇವುಗಳನ್ನು ಕೆಲವಾರು ಅವರ ವಿವಿಧ ಉಲ್ಲೇಖಗಳಲ್ಲಿ ಗುರುತಿಸಲ್ಪಟ್ಟಿವೆ. ಅವರಿಗೆ ಕಾದಂಬರಿ ರಚನೆಯ ಕಾಲದಲ್ಲಿ ಲಭ್ಯವಿಲ್ಲದ ಕೆಲವು ಐತಿಹಾಸಿಕ ದಾಖಲೆಗಳನ್ನು ಎನ್.ಎಸ್.ದೇವಿಪ್ರಸಾದ್ ಸಂಪಾಜೆಯವರು ತಮ್ಮ 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ' (ಪುಟ೨೭) ಕೃತಿಯಲ್ಲಿ ನೀಡಿದ್ದಾರೆ.

೧. ನಿಡಿಗೆರೆ ಲಕ್ಷ್ಮೀ ನರಸಿಂಹ ಶಾಸ್ತ್ರಿ ವಿರಚಿತ ಐಗೂರು ಇತಿಹಾಸದಲ್ಲಿರುವ ಲಾವಣಿ.
೨. ತಿ.ತಾ.ಶರ್ಮರ ಲೇಖನ 'ಕೊಡಗು ಮತ್ತು ಕೆನರಾ ಬಂಡಾಯ (೧೮೩೬–೩೭)
೩. ಕೆನರಾದ ಕಲೆಕ್ಟರಾಗಿದ್ದ ಲೆವಿನ್ ಬಂಡಾಯದ ಕುರಿತು ಸಲ್ಲಿಸಿದ ವರದಿ (ಕನ್ನಡ ಅನುವಾದ)
೪. ರೆ.ಜಿ. ರಿಕ್ತರ್‌ನ ಗಜೇಟಿಯರ್ ಆಫ್ ಕೂರ್ಗ್‌ನಲ್ಲಿರುವ ಬಂಡಾಯದ ವಿವರದ ಕನ್ನಡ ಭಾಷಾಂತರ
೫. ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಳೆ ಪಳಮೆ'ಯಲ್ಲಿರುವ ವರದಿ ಮತ್ತು ಬಹುಮಾನಿತರ ಹೆಸರುಗಳು.
೬. ೧೮೩೭ ನ್ಯಾಯಾಂಗ ಸೂಚಿ

ಈ ಎಲ್ಲಾ ದಾಖಲೆಗಳನ್ನು ಅವರು ಅದೇ ಕೃತಿಯಲ್ಲಿ ಸವಿವರವಾಗಿ ನೀಡಿದ್ದಾರೆ ಎನ್ನುವುದು ಉಲ್ಲೇಖನೀಯ.

ಕಲ್ಯಾಣಸ್ವಾಮಿಯ "ಕಥೆ ಒಂದರೊಳಗೊಂದಿರುವ ಎರಡು ವೃತ್ತಗಳಲ್ಲಿ (Concentric Circle) ಸಾಗುತ್ತದೆ. ಕೃತಿಯಲ್ಲಿ ಪೂರ್ತಿ ಆವರಿಸಿಕೊಂಡು ಅದಕ್ಕೆ ಒಂದು ರೂಪುಕೊಡುವ ಬಾಹ್ಯವೃತ್ತದಲ್ಲಿ ಪರಕೀಯರ ಆಳ್ವಿಕೆಯ ವಿರುದ್ಧ

ಭಾರತೀಯರು ನಡೆಸುವ ಹೋರಾಟವಿದೆ. ಈ ವೃತ್ತದೊಳಗಡೆ ಇದರ ಪ್ರತಿರೂಪಾದ ಅಂತಃವೃತ್ತದಲ್ಲಿ ಶೋಷಕರ ವಿರುದ್ಧ ಶೋಷಿತರು ನಡೆಸುವ ಹೋರಾಟದ ಚಿತ್ರವಿದೆ. ಆದರೆ ಎರಡೂ ವೃತ್ತಗಳ ಕೇಂದ್ರಬಿಂದು ಒಂದೇ. ಅಂದರೆ ಕಥೆ ಕೇಂದ್ರ ಬಿಂದುವಿನಿಂದ ಶುರುವಾಗಿ ಸಣ್ಣ ವೃತ್ತದಿಂದ ದೊಡ್ಡ ವೃತ್ತಕ್ಕೆ ಸಹಜವಾಗಿ ಬೆಳೆಯುತ್ತದೆ. ಈ ವಿಧದ ಬೆಳವಣಿಗೆ ಹೇಗೆ ಸಾಧ್ಯವಾಗುತ್ತದೆಯೆಂದರೆ ಕೃತಿಕಾರರು ಆಳುವವರ ಮತ್ತು ಆಳಿಸಿಕೊಳ್ಳುವವರು ಇವರ ಮಧ್ಯೆ ಯೋಜಿಸಿರುವ ಸಮೀಕರಣದ ಕಾರಣದಿಂದ." ೪

"ಕಲ್ಯಾಣಸ್ವಾಮಿಯಲ್ಲಿ ಅಣ್ಣುಗೌಡ ಹಾಗೂ ಅವನಿಗೆ ಸಹಾಯಕರಾಗಿ ನಿಂತ 'ಕಲ್ಯಾಣಸ್ವಾಮಿ' (ಪುಟ್ಟಬಸವ), ರಾಮಗೌಡ, ಮಾಚಯ್ಯ ಇವರುಗಳು ಅಮರ ಸುಳ್ಯದ ತುಂಡು ಪಾಳೆಯಗಾರ ರಾಮಪ್ಪಯ್ಯನನ್ನು ಎದುರಿಸುವುದೇ ಮತ್ತೊಂದು ಸ್ತರದಲ್ಲಿ ವಿಸ್ತರಿಸಿ, ಅವರು ಬ್ರಿಟಿಷರ ವಿರುದ್ಧ ಹೋರಾಡುವುದಾಗುತ್ತದೆ." ೫

ನಿರಂಜನರ ಈ 'ಕಲ್ಯಾಣಸ್ವಾಮಿ' ಕಾದಂಬರಿಯ ಮುಖ್ಯ ಸ್ವರೂಪ:ವಸ್ತು :ಅವನತಿಗೊಂಡ ಸಮಾಜ ಕಾದಂಬರಿಯಲ್ಲಿ ಕಥಾ ವಿನ್ಯಾಸವನ್ನು ರೂಪಿಸುವ ಪಾತ್ರಗಳು ಮುಖ್ಯವಾಗಿ ಬಹುತೇಕ ಎರಡು ವಲಯಗಳಲ್ಲೇ ಆವರ್ತಿಸುತ್ತವೆ. ಒಂದು ಕಡೆಗೆ–ಧಾರ್ಮಿಕ, ನೈತಿಕ ನಡಾವಳಿಗಳನ್ನು ಪ್ರತಿನಿಧಿಸುವ ಪಾತ್ರಗಳಾದರೆ, ಇನ್ನೊಂದು ಕಡೆಗೆ ಅನೈತಿಕವಾದ ಆಚರಣೆ ಮತ್ತು ಆಡಳಿತದ ದಬ್ಬಾಳಿಕೆಯನ್ನು ರೂಪಿಸಿಕೊಂಡಿರುವ ಪಾತ್ರಗಳು. ಕಾದಂಬರಿಯಲ್ಲಿ ಬರುವ ಬಹುಪಾಲು ಘಟನೆಗಳೆಲ್ಲ ಈ ಎರಡು ಗುಣಗಳ ಪರಸ್ಪರ ಎದುರು–ಬದುರಾಗುವ ಕ್ರಿಯೆಯನ್ನೇ ರೂಪಿಸಿಕೊಂಡಿರುವುದನ್ನು ನಾವಿಲ್ಲಿ ಗಮನಿಸಬಹುದು. ಹೀಗೆ ಕಾದಂಬರಿಯಲ್ಲಿ ಪ್ರಮುಖವಾಗಿ ಎರಡು ವಿರೋಧ ಗುಣಗಳ, ಸ್ವರೂಪಗಳ, ನಡಾವಳಿಯ ಪಾತ್ರಗಳು ಕಡೆಯ ಮುಖ್ಯವಾದ ಭೂಮಿಕೆಯನ್ನು ಸೂಚಿಸುತ್ತದೆ.

ಈ ಕಾದಂಬರಿಯ ವಸ್ತುವಿನಿಂದ ಹೊರಡುವ ಮುಖ್ಯ ಅಂಶ ಯಾವುದೆಂದರೆ "ಪರಂಪರಾಗತ ಸಂಸ್ಕೃತಿಯ ಮೌಲ್ಯದರ್ಶಗಳ ನಿಷ್ಕ್ರೀಯತೆ, ಅನಾರೋಗ್ಯಕರ ಪ್ರವೃತ್ತಿಗಳು, ಅಂಥ ವಾತಾವರಣದಲ್ಲಿ ತಾವೇ ತಾವಾಗಿ ಮರೆಯುವ ಪ್ರಭುತ್ವ" ೬

ಕಾದಂಬರಿಯ ಈ ಪ್ರಭುತ್ವಕ್ಕೂ ಬ್ರಿಟಿಷ್ ವಸಾಹತುಶಾಹಿ ಪ್ರಭುತ್ವಕ್ಕೂ ಇರುವ ಸಂಬಂಧಾಂತರಗಳನ್ನು ಗಮನಿಸಬೇಕಾಗುತ್ತದೆ.

ಮುಖ್ಯವಾಗಿ ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿ ಮತ್ತು ಅದರ ಕಾಲಘಟ್ಟದ ಸಾಂಸ್ಕೃತಿಕ ಸ್ಥಿತ್ಯಂತರಗಳ ಸಂಕ್ರಮಣ ಸ್ಥಿತಿಯು ಎರಡು ಮುಖ್ಯವಾದ ಪ್ರಭುತ್ವದ ನೆಲೆಗಳನ್ನು ಚಿತ್ರಿಸುತ್ತದೆ.

೧. ದೇಸೀ ಪ್ರಭುತ್ವ
೨. ವಸಾಹತುಶಾಹಿ ಪ್ರಭುತ್ವ

ದೇಸೀ ಪ್ರಭುತ್ವ ಕಂಡು ಬರುವುದು ದೇಸೀ ರಾಜರ ಆಡಳಿತದ ವಲಯದಲ್ಲಿ. ಈ ಪ್ರಭುತ್ವದ ನೇರ ಪ್ರತಿನಿಧಿ ಕೊಡಗು ಪ್ರಾಂತ್ಯದ ದೊರೆ ಚಿಕ್ಕವೀರ ರಾಜೇಂದ್ರ. ಚಿಕ್ಕ ವೀರನ ಬಗ್ಗೆ ಇರುವ ಐತಿಹ್ಯಗಳಲ್ಲಿ ಎರಡು ಬಗೆಯ ಅವನ ಗುಣಗಳನ್ನು ಹೇಳಲಾಗಿದೆ. "ಮೊಗ್ಲಿಂಗ್, ರಿಕೆಟ್ ಇವರನ್ನು ಆಧರಿಸಿ ಬರೆದ ರೈಸ್‌ನ ಬರವಣಿಗೆ ಅರಸನ ಕಾಮುಕತನ ಕ್ರೌರ್ಯವನ್ನು ಹೇಳಿದರೆ, ಈಸ್ಟ್ ಇಂಡಿಯಾ ಕಂಪೆನಿಯ ಒಬ್ಬ ಕ್ಯಾಪ್ಟನ್ ಚಿಕ್ಕವೀರನನ್ನು ಕಂಡು ಅವನ ಜೊತೆಗೆ ಇದ್ದವನೆಂದು ಹೇಳಿಕೊಳ್ಳುವ ಜಫರ್‌ಸನ್ ಎನ್ನುವವ ಚಿಕ್ಕವೀರನನ್ನು ಒಳ್ಳೆಯವನೆನ್ನುತ್ತಾನೆ. ಆತನ ಬಗೆಗಿನ ಆಪಾದನೆಗಳು ಅತಿರೇಕವಾಗಿ ಚಿತ್ರಿಸಲ್ಪಟ್ಟಿದೆ ಎನ್ನುತ್ತಾನೆ." [೭]

ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ಇದೇ ಚಿಕ್ಕವೀರ ರಾಜೇಂದ್ರನ್ನು ನಾಯಕನನ್ನಾಗಿಸಿ ಅದೇ ಹೆಸರಿನ ಐತಿಹಾಸಿಕ ಕಾದಂಬರಿಯನ್ನು ರಚಿಸಿದ್ದು, ಆ ಕಾದಂಬರಿಗೆ ನಾಯಕನ ವ್ಯಕ್ತಿತ್ವದ ಆಯ್ಕೆ ಮೇಲಿನವುಗಳಲ್ಲಿ ಮೊದಲನೆಯದ್ದಾಗಿದೆ. ಚಿಕ್ಕವೀರ ಒಂದು ಅರ್ಥದಲ್ಲಿ ಆ ಕಾಲದಲ್ಲಿ ಉಂಟಾದ ರಾಜಮನೆತನಗಳ ಅಧಃಪತನವನ್ನು ನೈತಿಕ ನೆಲೆಯಲ್ಲಿ ಪ್ರತಿನಿಧಿಸುತ್ತಾನೆ. ಆ ಕಾದಂಬರಿಯಲ್ಲಿ ಇವನು ನೈತಿಕವಾಗಿ, ಬೌದ್ಧಿಕವಾಗಿ ಹೀಗೆ ಅವನ ವ್ಯಕ್ತಿತ್ವದ ಸರ್ವ ಸ್ವರೂಪಗಳಲ್ಲೂ ನಾಶವಾಗಿ ಹೋಗುವ ಪಾತ್ರವಾಗಿ ವಿಜೃಂಭಿಸಿದ್ದಾನೆ.

ಮಾಸ್ತಿಯವರು ತಮ್ಮ ಕಾದಂಬರಿ 'ಚಿಕ್ಕವೀರ ರಾಜೇಂದ್ರ'ದ ವಸ್ತುವನ್ನು ಕುರಿತು ಪ್ರಾಸ್ತಾವಿಕದಲ್ಲಿ ಈ ರೀತಿ ಸೂಚಿಸುತ್ತಾರೆ. ಕಲ್ಯಾಣಸ್ವಾಮಿಗೆ ಆಶ್ರಯ ನೀಡಿದ್ದ ಆಡಳೀತದಲ್ಲಿ ದೇಸೀ ಪ್ರಭುತ್ವದ ಸ್ವರೂಪಕ್ಕೆ ಈ ಮಾತುಗಳು ನಿದರ್ಶನವಾಗುತ್ತದೆ.

ಒಂದು ಕಡೆ ಮೈಸೂರು, ಒಂದು ಕಡೆ ಮಲೆಯಾಳ, ಒಂದು ಕಡೆ ಮಂಗಳೂರಿನ ಆಡಳಿತಗಳಿರುತ್ತ ಮಧ್ಯೆ ನಿಂತ ಕೊಡಗಿನ ಅರಸರು ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವುದಕ್ಕೆ ಸದಾ ಕಾದಬೇಕಾಯಿತು. ಇದು ಮಲೆ ಸೀಮೆಯಾದ್ದರಿಂದ ಹೊರಗಿನ ಜನರಿಗೆ ಇವರನ್ನು ಗೆಲ್ಲುವುದು ಸಾಧ್ಯವಾಗಲಿಲ್ಲ." [೮]

ಕೊಡಗಿನ ಮಲೆಸೀಮೆಯಲ್ಲಿದ್ದ ಪ್ರಭುತ್ವದ ಆರಂಭಿಕ ಸ್ವರೂಪ ಈ ಮೇಲಿನ ಮಾತುಗಳಿಂದ ಸ್ಪಷ್ಟವಾಗುತ್ತದೆ. ಕಾದಂಬರಿಯ ಕಥೆಗೆ ಪ್ರವೇಶಿಕೆಯಂತಿದ್ದರೂ, ಕಲ್ಯಾಣಸ್ವಾಮಿಯ ಕಾಲದ ರಾಜಶಾಹಿ ವ್ಯವಸ್ಥೆಯ ರೂಪಣೆಯನ್ನು ಈ ಪ್ರಸ್ತಾವನೆ ತೋರಿಸಿಕೊಡುತ್ತದೆ.

ಸೂಕ್ಷ್ಮವಾಗಿ ನೋಡಿದರೆ 'ಕಲ್ಯಾಣಸ್ವಾಮಿ' ಕೇವಲ ಒಂದು ಐತಿಹಾಸಿಕ ಕಾದಂಬರಿಯಲ್ಲ. ಅದೊಂದು ಸಂಕೀರ್ಣ ರಾಜಕೀಯ ಕಾದಂಬರಿ ಎನ್ನುವುದು ಕಾದಂಬರಿಯ ಪ್ರಸ್ತಾವಿಕದಲ್ಲೇ ವ್ಯಕ್ತವಾಗುತ್ತದೆ. ಕೊಡಗು ರಾಜ್ಯ ಅವನತಿ ಹೊಂದಿದ ಪ್ರಕ್ರಿಯೆಯನ್ನು ಮತ್ತು ಆ ಕಾಲದಲ್ಲಿ ಎದ್ದ ಬಂಡಾಯದ ಜ್ವಾಲೆಯನ್ನು ಕಾದಂಬರಿ ಮುಂದೆ ಶೋಧಿಸಿಕೊಂಡು ಹೋಗುತ್ತದೆಯಷ್ಟೆ. ಕಾದಂಬರಿಯಲ್ಲಿ ಕೊಡಗಿನ ಅವನತಿಯ ಪ್ರಕ್ರಿಯೆ ಮತ್ತು ಕಲ್ಯಾಣಸ್ವಾಮಿಯ ಬಂಡಾಯಕ್ಕೆ ಮೂರು ಮುಖ್ಯ ಕಾರಣಗಳನ್ನು ನೀಡಬಹುದು.

೧. "ಚಿಕ್ಕವೀರ ರಾಜೇಂದ್ರ ಪಟ್ಟವೇರುವ ಮೊದಲೇ ಹಲವರ ಅಸಮಾಧಾನಕ್ಕೆ ಕಾರಣವಾಗಿರುವ ಅರಮನೆಯ ಒಳ ರಾಜಕಾರಣ.. ಇದರಿಂದಾಗಿ, ಚಿಕ್ಕವೀರ ರಾಜೇಂದ್ರನಿಗೆ ಪಟ್ಟವೆಂಬುದು ಬೆಂಕಿಯ ಕುಲುಮೆಯಾಯಿತು. ಅರಸನ ದೋಷಗಳನ್ನೇ ನಿರೀಕ್ಷಿಸುತ್ತಿದ್ದ ಸ್ವಾರ್ಥ ಸಾಧಕರಿಗೆ ಅವನನ್ನೇ ಸಂಚಿಗೆ ಸಿಲುಕುವಂತೆ ಮಾಡಲು ಸಾಧ್ಯವಾಯಿತು. ಇದು ದೇಸೀ ಪ್ರಭುತ್ವದ ಸೋಲಿಗೆ ಬಹಳ ದೊಡ್ಡ ಪ್ರೇರಣೆ ಎನ್ನಬಹುದು."[೯]

೨. "ಕೊಡಗು ರಾಜ್ಯದ ಆಚೆಗೆ ಬಹು ವಿಸ್ತಾರವಾಗಿ ಹಬ್ಬಿಕೊಂಡಿದ್ದ ಆಂಗ್ಲ ಸಾಮ್ರಾಜ್ಯ ದೇಶೀಯ ಸಂಸ್ಥಾನಗಳನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳಲು ಮಾಡುತ್ತಿದ್ದ ವಸಾಹತುಶಾಹಿ, ಸಾಮ್ರಾಜ್ಯಶಾಹಿ ಅಥವಾ ಬಂಡವಾಳಶಾಹಿ ರಾಜಕಾರಣ."[೧೦] ದೇಸೀ ರಾಜನ ನ್ಯೂನತೆಗಳನ್ನೇ ಎತ್ತಿ ಹಿಡಿದ ಕೊಡಗು ಪ್ರಾಂತ್ಯದ ಜನರಿಗೆ ತಮ್ಮ ವಲಯಕ್ಕೆ ಆಂಗ್ಲರ ಸೋಗಿನ ತಮ್ಮ ವಲಯಕ್ಕೆ ಆಂಗ್ಲರ ಸೋಗಿನ ಆಗಮನ ಮತ್ತು ಒಡ್ಡಿದ ಆಕರ್ಷಣೆಗಳು ಹೆಚ್ಚಾಗಿ ಪ್ರಭಾವ ಬೀರಿತು. ಅವರು ಆಂಗ್ಲರ ವಿರುದ್ಧ ದಂಗೆ ಏಳುವ ಬದಲಾಗಿ ಕೆಲವರ ಸಂಚಿನಿಂದ ಅವರಲ್ಲಿ ಸೆಳೆತಕ್ಕೆ ಒಳಗಾದರು. ಸ್ವಾರ್ಥವಶನಾದ ಬೋಪುದಿವಾನ ಮಂತ್ರಿಯ ಸಮಯಸಾಧಕತನದಿಂದಾಗಿ ಚಿಕ್ಕವೀರ ರಾಜೇಂದ್ರನೂ ತಾನೇ ತಿಳಿದೂ ತಿಳಿದು ರಾಜ್ಯವನ್ನು ಕೈಬಿಡುವಂತಾಯಿತು. ಇದು ದೇಸೀ ಪ್ರಭುತ್ವ ಶಿಥಿಲಗೊಂಡಾಗ, ಸಮಯೋಚಿತ ಹುನ್ನಾರದಿಂದ ವಸಾಹತುಶಾಹಿ ಪ್ರಭುತ್ವವು ಆ ಸ್ಥಳವನ್ನು ಆಕ್ರಮಿಸುವ ಬಗೆಯಾಗಿದೆ. ಒಂದು ರೀತಿಯಲ್ಲಿ ಪ್ರಭುತ್ವದ ಸ್ಥಾನಾಂತರವಷ್ಟೆ. ಒಂದು ನಿರಸನಗೊಂಡಾಗ ಇನ್ನೊಂದು ಪ್ರಬಲಗೊಳ್ಳುವ ಸಾಧನೆಯಿದು 'ಮತ್ಸ್ಯನ್ಯಾಯ'ದಂತೆ ಒಂದನ್ನು ನುಂಗಿ ಇನ್ನೊಂದು ಜೀವ ಪಡೆಯುವ ಕ್ರಮ.

೩. "ಒಬ್ಬ ರಾಜನಾಗಿ, ಒಬ್ಬ ವ್ಯಕ್ತಿಯಾಗಿ ಚಿಕ್ಕವೀರ ರಾಜೇಂದ್ರ ತನ್ನನ್ನು ಮೀರಿ ಬೆಳೆದಿದ್ದ ಮೇಲಿನ ಎರಡು ರಾಜಕಾರಣಕ್ಕೆ ಸ್ಪಂದಿಸಿದ ರೀತಿ, ಅವನ ವೈಯಕ್ತಿಕ ರಾಜಕಾರಣ." [೧೧]

ಬೋಪುದಿವಾನನ ಸಲಹೆಯನ್ವಯ ವಸಾಹತುಶಾಹಿಗಳಿಗೆ ಅನುವುಮಾಡಿಕೊಟ್ಟದ್ದು ಚಿಕ್ಕವೀರ ರಾಜೇಂದ್ರನ ವೈಯಕ್ತಿಕ ರಾಜಕಾರಣದ ಸೋಲಿಗೆ ಪ್ರಮುಖ ಕಾರಣ. ಆತ ವ್ಯಕ್ತಿಶಃ ಲಂಪಟನಂತೆ ಗೋಚರವಾಗುವ ವೇಳೆಗೇ, ವಸಾಹತುಗಳು ತೋರಿದ ಆಕರ್ಷಣೆಯು ಕೊಡಗಿನ ಪ್ರಾಂತ್ಯ ಸಹಜ ಸುಲಭವಾಗಿ ತನ್ನ ದೇಸೀ ಆಡಳಿತವನ್ನು ಕಳೆದುಕೊಳ್ಳುವಂತೆ ಮಾಡಿತು. ಆದರೆ, ಚಿಕ್ಕವೀರ ರಾಜೇಂದ್ರನ ಲಂಪಟತನ ಮಾಸ್ತಿಯವರ ತತ್ಪಾತ್ರ ಪ್ರಧಾನ ಕಾದಂಬರಿಯಲ್ಲಿ ಚಿತ್ರಿತವಾದಂತೆ, ನಿರಂಜನರ ಕಲ್ಯಾಣಸ್ವಾಮಿ ಕಾದಂಬರಿಯಲ್ಲಿ ಗೌಣವಾಗಿದೆ.

ಕೊಡಗಿನ ದುರಂತಕ್ಕೆ ಒಂದು ಬಿಡಿಯಾಗಿ, ಏಕೈಕ ಪರಮ ಕಾರಣವೆಂಬಂತೆ ಚಿತ್ರಿತವಾಗದೆ ಇವೆಲ್ಲವುಗಳ ಇಡಿಯಾದ ಸಂಬಂಧ ಸೃಷ್ಟಿಸಿದ ಸಂಕೀರ್ಣ ಸಂದರ್ಭದ ಒತ್ತಡವೇ ಕಾರಣವಾಗುತ್ತದೆ. ಹಾಗಾಗಿ, ವ್ಯಕ್ತಿತ್ವದ ಸರಳ ನೈತಿಕ ಪ್ರಶ್ನೆಗಳಿಗಿಂತ ರಾಜನೈತಿಕ ಇಲ್ಲಿ ಮುಖ್ಯವಾಗುತ್ತದೆ." [೧೨]

"ಜನಾಭಿಪ್ರಾಯ ರಾಜನ ವಿರುದ್ಧ ರೂಪುಗೊಳ್ಳುವುದು ಅವನ ವೈಯಕ್ತಿಕ ದುರ್ಗುಣಗಳ ವಿರುದ್ಧ ಸರಳ ನೈತಿಕ ಪ್ರಕ್ರಿಯೆಯಷ್ಟೆ ಆಗುವುದಿಲ್ಲ. ಅದಕ್ಕಿಂತ ಹೆಚ್ಚಾಗಿ ಪ್ರಜೆಗಳ ರಕ್ಷಣೆ, ಅವರ ದಿನನಿತ್ಯದ ಅರ್ಥವ್ಯವಸ್ಥೆ ಇವುಗಳ ಮೇಲೆ ಆಗುವ ಆಘಾತ ಮುಖ್ಯವಾದುದು. ಜನತೆ ಕೆಟ್ಟ ರಾಜನನ್ನು ಸಹಿಸಿಕೊಂಡೀತು. ಆದರೆ ಕೆಟ್ಟ ಆಡಳಿತವನ್ನು ಹೆಚ್ಚುಕಾಲ ಸಹಿಸಿಕೊಳ್ಳುವುದಿಲ್ಲ." [೧೩]

ಇದರಿಂದಾಗಿ ಚಿಕ್ಕವೀರ ರಾಜೇಂದ್ರನ ಗುಣವಿಶೇಷಗಳ ಮಾಸ್ತಿಯವರ ಚಿತ್ರಣದಂತೆ ವಿಷಯಾಸಕ್ತ, ದುರಾಡಳಿತಗಾರನಂತಿರುವ ಕಾರಣ ಅವನ ಅವಧಿ ನಷ್ಟವಾಯಿತು. ಮೇಲ್ನೋಟಕ್ಕೆ ಸುಖಾಡಳಿದಂತೆ ಕಾಣುವ ಬ್ರಿಟಿಷ್ ಅಧಿಕಾರದಿಂದ ಜನತೆ ಸೆಳೆಯಲ್ಪಟ್ಟರು. ಚಿಕ್ಕವೀರ ರಾಜೇಂದ್ರನ ಈ ಸೋಗಲಾಡಿತನದ ಕಲ್ಪನೆಯಿಂದಾಗಿಯೇ ಪ್ರಾಯಶಃ ಅವನ ಅಧೀನದಲ್ಲಿದ್ದ 'ಕಲ್ಯಾಣಪ್ಪನ ಬಗೆಗೂ ಟೀಕೆಗಳು ಹುಟ್ಟಿರಬಹುದು'.

"ಐತಿಹಾಸಿಕ ಸತ್ಯದ ದೃಷ್ಟಿಯಿಂದ ಕಲ್ಯಾಣಸ್ವಾಮಿ ಅತ್ಯಂತ ವಿವಾದಾಸ್ಪದ ವ್ಯಕ್ತಿ ಮತ್ತು ಇಬ್ಬರು 'ಕಲ್ಯಾಣಸ್ವಾಮಿ' ಎಂಬ ಹೆಸರಿನಿಂದ ಇದ್ದರೆಂದೂ, ಚಿಕ್ಕವೀರ ರಾಜೇಂದ್ರನ ಆಪ್ತಸರದಾರ ಕಲ್ಯಾಣಸ್ವಾಮಿ ಮತ್ತು ದಂಡುಕಟ್ಟಿ ಮಂಗಳೂರನ್ನು

ಕೆಲವು ಕಾಲ ವಶಪಡಿಸಿಕೊಂಡಿದ್ದ ಕಲ್ಯಾಣಸ್ವಾಮಿ–ಇವರುಗಳು ಬೇರೆ ಬೇರೆ ಎನ್ನುವ ಒಂದು ಮತವಿದೆ." [೧೪]

"ಇಂದಿನದನ್ನೇ ಆಗಲಿ ಅಥವಾ ಗತಕಾಲದ ಸಮಾಜವನ್ನೇ ಆಗಲಿ, ಪೂರ್ವ ನಿಶ್ಚಿತ ಭಾವನೆಗಳ ನೆಲೆಯಿಂದ ಚಿತ್ರಿಸುವುದರಲ್ಲಿರುವ ಒಂದು ದೊಡ್ಡ ಅಪಾಯವೆಂದರೆ ಆ ಕಾರಣದಿಂದ ಇತಿಹಾಸದ ಸರಳೀಕರಣವಾಗಿಬಿಡುತ್ತದೆ. ಅದಕ್ಕಿಂತ ಮುಖ್ಯವಾಗಿ ಕೃತಿಯಲ್ಲಿ ಪಾತ್ರಗಳ ಜಾಡು, ಭಾವನೆಗಳ ಓಟ ಎಲ್ಲವೂ ಸಾಮಾನ್ಯ ಓದುಗ ಅಪೇಕ್ಷಿಸುವ, ನಿರೀಕ್ಷಿಸುವ ರೀತಿಯಲ್ಲಿಯೇ ಇರುತ್ತವೆ. ಈ ತರಹ ಸುಲಭಸಿದ್ಧ (ರೆಡಿಮೇಡ್) ಪಾತ್ರಗಳು ಮತ್ತು ಭಾವನೆಗಳ ಕಾರಣದಿಂದ ಕೃತಿಕಾರ ಹೊಸತೇನನ್ನೂ ನಿರ್ಮಿಸುವುದಾಗುವುದಿಲ್ಲ. ಕಲ್ಯಾಣಸ್ವಾಮಿಯ ಐತಿಹಾಸಿಕತೆ ಏನೇ ಇರಲಿ, ಸಾಹಿತ್ಯಿಕ ದೃಷ್ಟಿಯಿಂದ ಅವನ್ನು ನೋಡಿದಾಗ ನಮಗೆ ಎದ್ದು ಕಾಣುವ ಕೊರತೆ ಎಂದರೆ ಇದೇ. ಇತಿಹಾಸದ ಸರಳೀಕರಣ ಮತ್ತು ಸುಲಭಸಿದ್ಧ ಪಾತ್ರ ಭಾವನೆಗಳ ಚಿತ್ರಣ. ವರ್ಣವಿನ್ಯಾಸದ ಸೂಕ್ಷ್ಮಾತಿಸೂಕ್ಷ್ಮ ಭಿನ್ನತೆಗಳ ಬದಲು ನಾವು ಕಾಣುವುದು ಅಚ್ಚ ಬಿಳಿ–ಕಪ್ಪು ವರ್ಣಗಳಲ್ಲಿ ಚಿತ್ರಿಸಿದ ಸಮಾಜ." [೧೫]

'ಕಲ್ಯಾಣ ಸ್ವಾಮಿ' ಕಾದಂಬರಿಯಲ್ಲಿ "ಆಳುವವರು ಯಾವ ರೀತಿಯಲ್ಲೂ ಒಳ್ಳೆಯವರಾಗಿಲು ಸಾಧ್ಯವಿಲ್ಲ. ಮತ್ತು ಆಳಿಸಿಕೊಳ್ಳುವವರು ಜಾಗೃಂತರಾದಾಗ, ಅವರನ್ನು ಮೋಸದಿಂದಲೇ ವಿನಹ ಬೇರೆ ಯಾವ ರೀತಿಯಲ್ಲೂ ಸೋಲಿಸಲಾಗುವುದಿಲ್ಲ.' – ಈ ವಿಚಾರ ಸರಣಿಯಿಂದ ಕಾದಂಬರಿಯ ನಿರ್ಮಾಣವಾಗಿರುವುದರಿಂದ ಕಲ್ಯಾಣಸ್ವಾಮಿಯ ಮತ್ತು ಅವನ ಜೊತೆಗಾರರೆಲ್ಲಾ ಉದಾತ್ತ ಭವ್ಯ ವ್ಯಕ್ತಿಗಳಾಗಿಬಿಟ್ಟಿದ್ದಾರೆ. ಕಲ್ಯಾಣಸ್ವಾಮಿ, ಚೆಟ್ಟಿ ಕುಡಿಯ, ನಂಜಯ್ಯ, ಮಾಚಯ್ಯ, ಕರ್ತು, ರಾಮೇಗೌಡ ಇವರಲ್ಲಿ ಯಾರಿಗೂ ಒಂದೇ ಒಂದು ಕ್ಷಣದಲ್ಲಿಯೂ ಮಾನವ ಸಹಜ ವಿಕಾರಗಳಾಗಲೀ, ಭೀತಿ ಅಸೂಯೆಗಳಾಗಲೀ ಇಲ್ಲ. ಪರಸ್ಪರ ಗುರುತು ಪರಿಚಯವಿಲ್ಲದಿದ್ದರೂ ನೋಡಿದ ಕ್ಷಣದಲ್ಲೇ ಅವರೆಲ್ಲಾ ಗಾಢಮಿತ್ರರಾಗುತ್ತಾರೆ. ಜಾತಿ ಮತ ಕುಲಭೇದಗಳನ್ನು ಮರೆತು ಇವರ ಕರೆಗೆ ಓಗೊಟ್ಟು, ಅದಕ್ಕೇ ಕಾಯುತ್ತಿದ್ದರೆಂಬಂತೆ ಹಳ್ಳಿಹಳ್ಳಿಗಳಲೆಲ್ಲಾ ಅಸಂಖ್ಯಾತ ಜನರು ಇವರನ್ನು ಸೇರುತ್ತಾರೆ. ಸ್ತ್ರೀಯರೆಲ್ಲಾ 'ಭಾರತೀಯ ವೀರಮಾತೆ'ಗಳು ತಾನೆ! ಅವರೆಲ್ಲಾ ಸಂತೋಷದಿಂದ ಇವರಿಗೆ ಬುತ್ತಿ ಕಟ್ಟಿಕೊಟ್ಟು ಯುದ್ಧಕ್ಕೆ ಕಳುಹಿಸುತ್ತಾರೆ. ಇಷ್ಟೆಲ್ಲಾ ಅಪ್ರತಿಮ ವೀರರಿದ್ದೂ, ರಾಮೇಗೌಡನಂತಹ ಕಲ್ಯಾಣಸ್ವಾಮಿಯೇ ಘೋಷಿಸುವಂತೆ – ಸಮರ ಕುಶಲನಿದ್ದೂ, ಒಂದೇ ರಾತ್ರಿಯಲ್ಲಿ ಅತಿ ಸುಲಭವಾಗಿ, ಇವರೆಲ್ಲಾ ಬ್ರಿಟಿಷರಿಗೆ ಏನೂ ಹೋರಾಟವಿಲ್ಲದೆ ಸೆರೆಸಿಕ್ಕುತ್ತಾರೆ. ಅದು ಬೇರೆಯೇ ವಿಷಯ.

ಇವರಿಗೆ ವಿರುದ್ಧವಾಗಿರುವ ಬ್ರಿಟಿಷರು ಮೋಸಗಾರರು, ಕಡಲ್ಗಳ್ಳರು, ನೀಚರು ಹಾಗೂ ಹೇಡಿಗಳು. ಕಲ್ಯಾಣಸ್ವಾಮಿ ಬಂಡಾಯದ ಸುದ್ದಿ ಕೇಳಿಯೇ ಮಡಿಕೇರಿಯಲ್ಲಿದ್ದ ಲೀ ಹಾರ್ಡಿಯ ಜಂಘಾಬಲವೇ ಉಡುಗಿಹೋಯಿತು. ಕಂಡು ಕೇಳರಿಯದ ಕಲ್ಯಾಣಸ್ವಾಮಿಯ ಹೆಸರನ್ನು ಯಾರಾದರೂ ಉಚ್ಚರಿಸಿದರೂ ಸಾಕು, ಆತ ಬೆಚ್ಚಿ ಬೀಳುತ್ತಿದ್ದ......ಯಾವುದೇ ಗುಡ್ಡದಲ್ಲಿ, ಹೊಗೆಯಾಡಿದರೆ 'ರೈತರ ದಂಗೆ' ಎಂದು ಹೆದರುತ್ತಿದ್ದ ಆತ. ಕಾಡಿಗೆ ಬೆಂಕಿ ಬಿದ್ದರಂತೂ 'ವಿದ್ರೋಹಿಗಳು' ಎಂದು ನಡುಗುತ್ತಾ ಕೂಗಾಡುತ್ತಿದ್ದ' (ಪುಟ ೧೦೨)ಇಂತಹ ಹೇಡಿಗಳಿಗೆ ಕೊಡಗು ಪ್ರಾಂತ್ಯವನ್ನು ಗೆಲ್ಲಲು ಹಾಗೂ ಕಲ್ಯಾಣಸ್ವಾಮಿಯ ವೀರ ಸಂಗ್ರಾಮವನ್ನು ಹತ್ತಿಕ್ಕಲು ಹೇಗೆ ಸಾಧ್ಯವಾಯಿತು? ಉತ್ತರ ಬಹು ಸುಲಭ, ನಮ್ಮವರ ವಿಶ್ವಾಸ ದ್ರೋಹ ಮತ್ತು ಮೋಸ." [೧೬]

'ಕಲ್ಯಾಣಸ್ವಾಮಿ' ಕೃತಿಯಲ್ಲಿ ಬೋಪು ದಿವಾನ ಖಳನಾಯಕನಾಗಿದ್ದು, ಪ್ರತಿಯೊಂದು ಅವಘಡಗಳಲ್ಲೂ ರಾಜನ ಪದಚ್ಯುತಿಯಲ್ಲೂ ಆತನ ಕೈವಾಡವಿದೆ. ಆತನ ಮೋಸ, ವಿಶ್ವಾಸದ್ರೋಹ, ವಂಚನೆ, ದುರಾಸೆ, ಸ್ವಾರ್ಥಗಳಿಂದಾಗಿ, ಆಂಗ್ಲರಿಗೆ ಬಲ ದೊರೆಯಿತು. ಬೋಪು ದಿವಾನ ತನಗೆ ಅನ್ನಾಶ್ರಯಗಳನ್ನಿತ್ತ ಚಿಕ್ಕವೀರ ರಾಜೇಂದ್ರನಿಗೇ ತನ್ನ ಸ್ವಾರ್ಥ ಸಾಧನೆಗೋಸ್ಕರ ಕೇಡು ಬಯಸುತ್ತಾನೆ. ಇದೇ ರೀತಿಯ ಮಂತ್ರಿಯಿಂದಲೇ ಅರಸರ ಮತ್ತು ಸಾಮ್ರಾಜ್ಯದ ಅವನತಿ ನಡೆದಿರುವ ಪ್ರಸಂಗ ಇದುವೇ ಪ್ರಥಮವಲ್ಲ. ತುಳುನಾಡನ್ನು ಆಳಿದ ಭಾರತದ ಪ್ರಥಮ ಸ್ವಾತಂತ್ರ ಹೋರಾಟಗಾರ್ತಿ ಉಳ್ಳಾಲದ ವೀರರಾಣಿ ಅಬ್ಬಕ್ಕನ ಕಥೆಯಲ್ಲೂ ಆಕೆ ತನ್ನ ಮಂತ್ರಿ ಮತ್ತು ಅಳಿಯನಾದ ಕಾಮರಾಯನಿಂದಲೇ ಅಂತ್ಯಗಾಣುವುದನ್ನು ಗಮನಿಸಬಹುದು. ಅಲ್ಲೂ ಹೋರಾಟ ಕಟಿಬದ್ಧವಾಗಿರುವುದು ಪಾಶ್ಚಿಮಾತ್ಯರ ವಿರುದ್ಧವೇ ಬ್ರಿಟಿಷರ 'ಒಡೆದು ಆಳುವ ನೀತಿ'–(Divide and Rule) ಯ ಅನುಷ್ಠಾನಕ್ಕೆ ಇದು ಅಡಿಪಾಯವಷ್ಟೆ. ಕೊಡಗಿನ ಅರಸನನ್ನು ಬೋಪು ದಿನಾನನಿಗೆ ವಿವಿಧ ಆಮಿಷಗಳನ್ನೊಡ್ಡಿ ಕೈಗೊಂಬೆಯಾಗಿಸುತ್ತಾರೆ. ಮೀಸೆ ನುಸುಳಲು ಅವಕಾಶ ಸಿಕ್ಕರೆ ಇಡೀ ಶರೀರವನ್ನೇ ನುಗ್ಗಿಸಿಬಿಡಬಲ್ಲ ಜಿರಳೆಯ ಕೌಶಲ್ಯದಂತೆ ಯಾವುದೇ ಸಣ್ಣ ಆಶ್ರಯವನ್ನು, ಅವಕಾಶವನ್ನು ಪಡೆದುಕೊಂಡ ಬ್ರಿಟಿಷ್ ಅಧಿಕಾರಿಗಳು ನಂತರದಲ್ಲಿ ವ್ಯವಹಾರಿಕವಾಗಿ, ಆಡಳಿತಾತ್ಮಕವಾಗಿ ಇಡೀ ಕೊಡಗನ್ನೇ ವಶಪಡಿಸಿಕೊಳ್ಳುವ ಮತ್ತು ಅಲ್ಲಿನ ಜನಸ್ಥಿತಿಗತಿಗಳನ್ನು ತಮ್ಮ ಪ್ರಭಾವಲಯಕ್ಕೆ ಪೂರಕವಾಗುವಂತೆ ಪರಿವರ್ತಿಸಿಕೊಳ್ಳುವುದನ್ನು ಕಾಣಬಹುದು.

ಈ ಸಂದರ್ಭದಲ್ಲಿ 'ಸ್ವಾಮಿ ಅಪರಂಪಾರ' ಸೇರಿದಂತೆ ಕಲ್ಯಾಣಸ್ವಾಮಿ ಎಬ್ಬಿಸುವ ಬಂಡಾಯ ಯಕಶ್ಚಿತ್ ತಕ್ಷಣದ ನಿರ್ಧಾರವಲ್ಲ. ಅಲ್ಲದೆ, ಆಗಾಗ ಬಂದು ಹೋಗುವ ಮಿಂಚಿನ ಬೆಳಕಲ್ಲ. ಅದು ಎಂದೂ ಕುಂದದ ಸೂರ್ಯ ರಶ್ಮಿ. ಚರಿತ್ರೆಯ

ಪೂರ್ವಾಗ್ರಹಿಗಳ ಕಾರ್ಮೋಡ ಕವಿದಂತೆ ಕೆಲವೆಡೆ ಗೋಚರವಾದರೂ, ಅದು ಶಾಶ್ವತ ಮರೆಮಾಸಲು ಶಕ್ತವಾದ ತಡೆಯಲ್ಲವಷ್ಟೆ.

ವ್ಯವಸ್ಥೆಯೊಂದು ಎರಡು ಬಗೆಗಿನ ಯಾಜಮಾನ್ಯವನ್ನು ಜನತೆಯ ಮೇಲೆ ಹೇರಿಸಹುದು.

೧. ಒಪ್ಪಿತ ಯಾಜಮಾನ್ಯ
೨. ಒತ್ತಾಯದ ಯಾಜಮಾನ್ಯ

ಮೊದಲನೆಯದ್ದು ಎರಡನೆಯದ್ದಕ್ಕಿಂತ ಅಧಿಕ ಅಪಾಯಕಾರಿ ಮತ್ತು ಅವಿನಾಶಿ. ಏಕೆಂದರೆ ಅದನ್ನು ಜನತೆ ಶಿರಸಾ ಸಮ್ಮತಿಸಿ ಅನುಸರಿಸುತ್ತಿರುತ್ತಾರೆ. ಅದು ಅವರಿಗೆ ಯಾಜಮಾನ್ಯವೆಂದು ಅನ್ನಿಸಿಯೇ ಇರುವುದಿಲ್ಲ. ಅಷ್ಟರ ಮಟ್ಟಿಗೆ ರಕ್ತಗತವಾಗಿರುತ್ತದೆ. ಈ ಅನ್ಯೋನ್ಯತೆಯಿಂದಾಗಿ ಅವರು ತಮ್ಮನ್ನಾಳುವ ಪ್ರಭುತ್ವಕ್ಕಾಗಿ ಪ್ರಾಣ–ಮಾನ ತ್ಯಾಗಕ್ಕೂ ಸದಾ ಸನ್ನದ್ಧರಾಗಿರುತ್ತಾರೆ. ಉದಾ:– ಪ್ರಜೆಗಳಿಗೆ ರಾಜಯಾಜಮಾನ್ಯ.

ಒತ್ತಾಯದ ಯಜಮಾನ್ಯ ಸಹಜ–ಸಾಮಾನ್ಯವಲ್ಲ. ಅದು ಹೊರಗಿನ ಶಕ್ತಿಗಳು ಒತ್ತಡದಿಂದ ಹೊರಿಸುವಂಥದ್ದು. ಮನಸ್ಸಿಲ್ಲದಿದ್ದರೂ ಅದನ್ನು ಪಾಲಿಸಬೇಕಾಗುತ್ತದೆ. ಉದಾಹರಣೆಗೆ, ಕಂಬಾರರ 'ಜೈಸಿದ ನಾಯಕ'ದಲ್ಲಿ ದೇಸಾಯಿಯ ಯಾಜಮಾನ್ಯ.

ಚಿಕ್ಕವೀರನ ಆಡಳಿತಕ್ಕಾಗಿ ಕಲ್ಯಾಣಸ್ವಾಮಿ ಪರಿಶ್ರಮಿಸುವುದು ಒಪ್ಪಿತ ಯಜಮಾನ್ಯಕ್ಕೆ ಸಲ್ಲಿಸುವ ಸೇವೆಯೆಂದೇ ಹೇಳಬೇಕಾಗುತ್ತದೆ. ಅದು ಕಲ್ಯಾಣಸ್ವಾಮಿಯ ನಾಡನಿಷ್ಠೆ ಮತ್ತು ಸ್ವಾಮಿ ನಿಷ್ಠೆ. ಆದರೆ ಆಂಗ್ಲರು ತಮ್ಮ ಒತ್ತಡದ ಯಜಮಾನ್ಯವನ್ನು ಸ್ಥಾಪಿಸುವ ಮುನ್ನ ಅದನ್ನು ಒಪ್ಪಿತವನ್ನಾಗಿ ಮಾಡುತ್ತಾರೆ. ಏಕಾಏಕಿ ಬ್ರಿಟಿಷರು ತಾವು ತಾವೇ ಅಧಿಕಾರ ಸ್ಥಾಪನೆಗೆ ಕೊಡಗಿನ ಪ್ರಾಂತ್ಯಕ್ಕೆ ಬಂದಿದ್ದರೆ ಅದು ಅಲ್ಲಿನ ಜನತೆಗೆ ಒತ್ತಾಯದ ಪ್ರಭುತ್ವದಂತೆ ಕಂಡು, ತೀವ್ರ ವಿರೋಧಕ್ಕೆ ಗುರಿಯಾಗುತ್ತಿತ್ತು. ಆದರೆ, ಬ್ರಿಟಿಷರು ಅಧಿಕಾರ ಸ್ಥಾಪನೆ ಮಾಡಿರುವುದು ತೀರಾ ಒಮ್ಮಿಂದೊಮ್ಮೆಗೆ ಅಲ್ಲ. ಬದಲಾಗಿ ಮಂದಗತಿಯಲ್ಲಿ. ಅದು ನಿಧಾನ ಪ್ರಸರಿಸುವ ವಿಷದಂತೆ ಸ್ಥಳೀಯ ಪ್ರಭುತ್ವವನ್ನು ಹಂತಹಂತವಾಗಿ ಕೊನೆಗಾಣಿಸಿತು. ತಾವು ಆಧಿಕಾರ–ವ್ಯಾಪಾರಗಳನ್ನು ಸ್ಥಾಪಿಸುವ ಮುನ್ನ, ಆ ಸ್ಥಳೀಯ ಮಂತ್ರಿ ಅಥವಾ ಯಾವುದೇ ಪ್ರಬಲ ವ್ಯಕ್ತಿಯನ್ನು ಕೈವಶಮಾಡಿಕೊಂಡು, ಆಮಿಷಗಳನ್ನೊಡ್ಡಿ ನಂತರ ಅವನ ಸ್ವಾರ್ಥ, ದುರಾಸೆಗಳನ್ನೇ ದಾಳಿಯ ಅಸ್ತ್ರವನ್ನಾಗಿ ಬಳಸುವುದು ಚರಿತ್ರೆ–ಪುರಾಣಗಳಲ್ಲಿ ಬಹಳ ಪ್ರಸಿದ್ಧ ತಂತ್ರವಾಗಿದೆ.

ಕೊಡಗಿನ ಬೋಪು ದಿವಾನ ಬ್ರಿಟಿಷರ ವ್ಯಾವಹಾರಿಕ ಆಡಳಿತ ಸ್ಥಾಪನೆಯ ಕೌಶಲ್ಯಕ್ಕೆ ಇನ್ನೊಂದು ಬಲಿಯಷ್ಟೆ. ಇದರಿಂದಾಗಿ ಒತ್ತಡವೆನ್ನಲಾಗದಂತೆ ಅಧಿಕಾರವನ್ನು ಸರ್ವಸಮ್ಮತಗೊಳಿಸಲು ಆಂಗ್ಲರಿಗೆ ಸುಲಭ ಸಾಧ್ಯವಾಯಿತು.

ಊರವನೊಬ್ಬ ಆಂಗ್ಲರ ಆಗಮನವನ್ನು ಕುರಿತಂತೆ "ಕೆಂಪು ಮೋರೆಯೋನು ಇನ್ನು ಕುದುರೆ ಮೇಲೆ ಕೂತು ಬರ್‍ತಾನೆ. ಕೈಲಿ ಚಾಟಿ ಹಿಡಿದು, ನಮ್ಮ ಬೆನ್ನಿಗೆ ಬಾರಿಸಿ, 'ಬದ್ಮಾಷ್'! ಅನ್ತಾನೆ. ನಾವು ಇದಿರಾಡಿದರೆ ತುಪಾಕಿಯಿಂದ ಸುಟ್ಟು ಹಾಕ್ತಾನೆ!" [೧೭] ಎನ್ನುವ ಮಾತು ಕೊಡಗರು ಆಂಗ್ಲರ ಬಗ್ಗೆ ಕೇಳಿ ತಿಳಿದ ಅರಿವು. 'ಬದ್ಮಾಷ್' ಎಂಬಂತೆ ಬೆನ್ನಿಗೆ ಚಾವಟಿಯಿಂದ ಬಾರಿಸುವ ಅವರ ಕ್ರೌರ್ಯಕ್ಕೆ ನಂತರದ ಮಾತಿನಲ್ಲಿ ತಕ್ಷಣದ ಸವಾಲು ವ್ಯಕ್ತವಾಗುತ್ತದೆ.

"ಅವನು ವಾಪಸು ಹೋಗೋ ಆಸೆ ಇಟ್ಕೊಂಡು ಇಲ್ಲಿಗೆಲ್ಲಾ ಬರ್‍ತಾನಂತೋ?" [೧೮]

ಹೀಗೆ ಮುಂದುವರಿದ ಕಲ್ಯಾಣಪ್ಪನ ಸಂಗಡಿಗರ ಮಾತಿನಲ್ಲೇ ಬ್ರಿಟಿಷ್ ಪ್ರಭುತ್ವದ ವಿಸ್ತರಣೆಯ ಬಗ್ಗೆ ಸ್ಪಷ್ಟರೂಪವಿದೆ.

ಉದಾಹರಣೆಗೆ,

"ಒಬ್ಬರ ವಿರುದ್ಧ ಇನ್ನೊಬ್ಬರನ್ನು ಎತ್ತಿಕಟ್ಟಿ, ಇಬ್ಬರನ್ನೂ ಶಕ್ತಿಗುಂದಿಸಿ, ಮಧ್ಯೆ ತಮ್ಮ ಬಾವುಟವನ್ನು ಭದ್ರವಾಗಿ ನೆಡುತ್ತಿದ್ದ ಸಮರ್ಥರು ಇಂಗ್ಲೀಷರು." [೧೯]

ನಿರಂಜನರ ಈ ಮಾತು ದೇಸೀ ರಾಜಕಾರಣದ ಎರಡು ಬಣಗಳ ನಡುವೆ ಕಲಹವೆಬ್ಬಿಸಿ, ಮೂರನೆಯವರಾಗಿ ಬ್ರಿಟಿಷರು ಲಾಭ ಪಡೆಯುವ ಅವರ 'ಒಡೆದು ಆಳುವ ನೀತಿ'ಯ ಇನ್ನೊಂದು ಮುಖವನ್ನು ಬಯಲು ಮಾಡುತ್ತದೆ. ಏಕತ್ವವನ್ನು ಇಬ್ಭಾಗಗೊಳಿಸಿ, ತಾವು ಅಧಿಕಾರ ಸ್ಥಾಪಿಸುವ ಆಂಗ್ಲರ ಸಮಯಸಾಧಕತನಕ್ಕೆ ಇದು ನಿದರ್ಶನ. ಹೀಗೆ ಸ್ಥಾಪಿಸಿದ ಅಧಿಕಾರದ ವ್ಯಾಪ್ತಿ ನಾಲ್ದೆಸೆಗಳಿಗೆ ಹಬ್ಬಿ, ಕೊನೆಗೆ ಆಶ್ರಯವಿತ್ತ ನೆಲೆಯ ಮೂಲ ನಿವಾಸಿಗಳನ್ನೇ ಗುಲಾಮತನದ ನೊಗವನ್ನು ಹೊರುವ ಹೋರಿಗಳನ್ನಾಗಿಸಿ, ತಮಗೆ ಬೇಕಾದಂತೆ ಬಳಸಿಕೊಳ್ಳುತ್ತಾರೆ.

"...ಹಾಗೆ ಕೊಡಗಿಗೆ ಬಂತು ಇಂಗ್ಲೀಷರ ಕುದುರೆ, ಕೊಡಗಿನ ಹೋರಿಗಳು ಬಯಲು ಭೂಮಿಗಿಳಿದು ಅವರ ಫಿರಂಗಿಗಳನ್ನೆಳೆದುವು.

ಮೊದಲು ಒಂದು ಕುದುರೆ, ಬಳಿಕ ಹಲವಾರು. ಅವರ ಫಿರಂಗಿಯೂ ಅಷ್ಟೇ. ಮೊದಲು ಒಂದು. ಬಳಿಕ ಹಲವಾರು." [೨೦]

ಕೊಡಗಿನ ನೆಲವನ್ನು ನಿಧಾನವಾಗಿ ತಮ್ಮ ನೆರಳಡಿಗೆ ತರುವ ಅವರ ಆಡಳಿತ ತಂತ್ರಕ್ಕೆ ಸ್ಪಷ್ಟ ನೋಟವಿದು.

ನಿರಂಜನರೇ ಹೇಳುವಂತೆ 'ಶ್ರೀ ದೇವರು ಸೂರ್ಯ ಚಂದ್ರ ಭೂಮಿ ಸಾಕ್ಷಿಯಾಗಿ' ಬ್ರಿಟಷರೊಂದಿಗೆ ದೇಸೀ ರಾಜ ಮಾಡಿಕೊಂಡ ಸ್ನೇಹ ನಾಡಿಗೆ ಮೈತ್ರಿಯ ಆಲಿಂಗನವಾಗಲಿಲ್ಲ. ಬದಲಾಗಿ ಮರಣದ ಅಪ್ಪು ಹಿಡಿತವಾಯಿತು.

ದಂಗೆಯ ಕಾಲದಲ್ಲಿ ಕೊಡಗಿನ ಇತಿಹಾಸಕಾರರಿಂದ ಆದ ದ್ರೋಹದ ಬಗ್ಗೆ ನಿರಂಜನರು 'ಕಲ್ಯಾಣಸ್ವಾಮಿ' ಚಾರಿತ್ರಿಕ ಕಾದಂಬರಿಯ ಹಿನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ:

"೧೮೫೭ರಲ್ಲಿ ರಾಷ್ಟ್ರದಾದ್ಯಂತ ನಡೆದ ಪ್ರಪ್ರಥಮ ಸ್ವಾತಂತ್ರ್ಯ ಸಂಗ್ರಾಮವನ್ನು 'ಸಿಪಾಯಿ ದಂಗೆ' ಎಂದು ಕರೆದು ಇತಿಹಾಸ ಬರೆದವರೂ ಇಂಗ್ಲಿಷರು. ನಮ್ಮ ಹಿಂದಿನವರು ಓದಿರುವುದು ಆ ಚರಿತ್ರೆಯನ್ನೇ. ನಾವು ಓದಿರುವುದೂ ಅದನ್ನೆ. ಆದರೆ ಈಗ, ೧೮೫೭ರ ಹೋರಾಟಕ್ಕಿದ್ದ ಚಾರಿತ್ರಿಕ ಮಹತ್ವವನ್ನು ಅರ್ಥ ಮಾಡಿಕೊಳ್ಳಲು ನಾವು ಸಮರ್ಥರಾಗಿದ್ದೇವೆ.

ಅಂತೆಯೇ, ಆ ಸಂಭವಕ್ಕೆ ೨೦ ವರ್ಷಗಳ ಹಿಂದೆ ಕಲ್ಯಾಣಸ್ವಾಮಿಯ ಕಥೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ನಮಗೆ ಕಷ್ಟವಾಗಬಾರದು.

ಕಲ್ಯಾಣಪ್ಪ ಪುಂಡನೆಂಬುದಕ್ಕೆ ಯಾವ ಆಧಾರವೂ ಇಲ್ಲ. ಆತ ಜನರನ್ನು ದೋಚಿದನೆಂದು ಯಾರೂ ಹೇಳುವುದಿಲ್ಲ. ಆತ ಯುದ್ಧ ಸಾರಿದುದು ಇಂಗ್ಲಿಷರ ವಿರುದ್ಧ. ಆತನ ಕಣ್ಣಿದ್ದುದ್ದು ಅವರ ಸೈನ್ಯದ ಮೇಲೆ, ಖಜಾನೆಯ ಮೇಲೆ. ತಮಗೆ ಕಂಟಕರಾಗಿದ್ದವರನ್ನು ನರ ಪಿಪಾಸಿಗಳೆಂದು ಸಾಮ್ರಾಜ್ಯವಾದಿಗಳು ಚಿತ್ರಿಸುವುದು ಹೊಸ ವಿಷಯವಲ್ಲವಷ್ಟೆ? ಅಂತಹ 'ನರಪಿಶಾಚಿ' ಕೊಡಗಿನ ಕಲ್ಯಾಣಪ್ಪ!

ರಾಜರಿಗೆ ಸಂಬಂಧಿಸಿದುದು ಮಾತ್ರ ಇತಿಹಾಸವೆಂದು ಭಾವಿಸಿದವರು ಬರೆದುದರಲ್ಲಿ ಕಲ್ಯಾಣಪ್ಪನ ವಿಷಯ ದೊರೆಯುವುದು ಎರಡು ಮೂರು ಸಾಲು ಮಾತ್ರ. ಯಾಕೆಂದರೆ ಕಲ್ಯಾಣಸ್ವಾಮಿ ರಾಜವಂಶಸ್ಥನಲ್ಲ.

ಇಂಗ್ಲಿಷರು ಕೊಡಗಿನ ಮೇಲೆ ನಡೆಸಿದುದು ಅನ್ಯಾಯದ ಯುದ್ಧ. ಅರಸ ವೀರ ರಾಜೇಂದ್ರನಿಗೆ ಅವರು ಬಗೆದುದು ವಿಶ್ವಾಸ ದ್ರೋಹ. ಆತನನ್ನು ಓಡಿಸಿದ ವೈಖರಿ ನಾಗರಿಕರಾದವರೆಲ್ಲ ನಾಚಿಕೆಯಿಂದ ತಲೆತಗ್ಗಿಸುವಂಥಾದ್ದು. ಅಂತಹ ಘಟನೆಯಿಂದ ಜನ ಕೋಪೋದ್ರಿಕ್ತರಾದರೆಂದು ಭಾವಿಸುವುದರಲ್ಲಿ ಏನೂ ತಪ್ಪಿಲ್ಲ."[೨೧]

ಹೀಗೆ ಅಭಿಪ್ರಾಯಿಸುವ ನಿರಂಜನರ ಈ ಕಾದಂಬರಿಯು ಅಮರ ಸುಳ್ಯದ ಕ್ರಾಂತಿ ನಡೆದು ಕೇವಲ ೧೨೦ ವರ್ಷಗಳ ನಂತರ ಕಾಣಿಸಿಕೊಂಡಿದೆ. "ಐತಿಹ್ಯಗಳನ್ನು ಆಧರಿಸುವುದು ತಪ್ಪಲ್ಲ. ರಾಮಾಯಣ ಲಂಕೆಯವರೆಗೆ ದುಃಖಾಂತ್ಯವಾದಂತೆ-ಕೆಲವೊಂದು ಘಟನೆಗಳು ಪ್ರಾದೇಶಿಕವಾಗಿ ಬೇರೆ, ಬೇರೆ ದೃಷ್ಟಿಕೋನಗಳಿಂದ ನೋಡಲ್ಪಡುತ್ತವೆ. ನಂದಾವರದ ಲಕ್ಷ್ಮಪ್ಪನನ್ನು ಗಲ್ಲಿಗೇರಿಸಿ, ಶವವನ್ನು ಬಿಕರನ ಕಟ್ಟೆ (ಈಗಿನ ಬಿಕರ್ನಕಟ್ಟೆ)ಯಲ್ಲಿ ಸರಪಳಿಗಳಿಂದ ತೂಗಿಟ್ಟರು. ಆತನ ಆಸ್ತಿ ಬ್ರಿಟಿಷರ ಪರ ವಹಿಸಿದವರಿಗೆ ಕೊಡಲ್ಪಟ್ಟಿರಬಹುದು. ಹಾಗೆ ಮಂಗಳೂರು ಸುತ್ತಮುತ್ತ ಲಕ್ಷ್ಮಪ್ಪ ಬಂಗರಸ-ಕಲ್ಯಾಣಪ್ಪನೆಂಬ ದರೋಡೆಕೋರನಿಗೆ ಸಹಾಯ ಮಾಡಿದ ಧೂರ್ತನೆಂದು ಪ್ರಚಾರ ನಡೆಸಲು ಒಂದು ಇಲಾಖೆಯನ್ನೇ ಸರಕಾರ ತೆರೆದಿರಬಹುದು. ಒಟ್ಟಿನಲ್ಲಿ ಬ್ರಿಟಿಷರು ಸಾಕಷ್ಟು ದಾಖಲೆಗಳನ್ನು ಬಿಟ್ಟುಹೋಗಿದ್ದಾರೆ. ಅವರು ಬರೆದ ಸಾಲುಗಳ ನಡುವೆ ಸತ್ಯಾನ್ವೇಷಣೆ ಸಾಧ್ಯ." [೨೨]

ನಿರಂಜನರ ಸಾಹಿತ್ಯ ಎಂದೆಂದಿಗೂ ಪ್ರಜಾ ಕೇಂದ್ರಿತ ಕಾಳಜಿ ಉಳ್ಳದ್ದು. 'ಕಲ್ಯಾಣಸ್ವಾಮಿ' ಕಾದಂಬರಿ 'ಪ್ರಭುತ್ವ' ಪ್ರಧಾನ ಚಾರಿತ್ರಿಕ ಘಟನೆಗಳ ಪುನರ್ ಸೃಷ್ಟಿಯಂತೆ ಮೇಲ್ನೋಟಕ್ಕೆ ಕಂಡುಬಂದರೂ ಇಲ್ಲಿ ಸಾಮಾನ್ಯ ಪ್ರಜೆಗೂ ಗೌರವದ ಸ್ಥಾನವಿದೆ. ಹಾಗೆ ನೋಡಿದರೆ ಕಾದಂಬರಿಯ ಶೀರ್ಷಿಕೆಯೇ ಓರ್ವ ಪ್ರಜಾಂಕಿತವಾಗಿದ್ದು. ಅದು ದೇಸೀ ಪ್ರಭುತ್ವಕ್ಕೆ ಪರವಾಗಿ ಮತ್ತು ವಸಾಹತು ಪ್ರಭುತ್ವಕ್ಕೆ ವಿರುದ್ಧವಾಗಿ ಕಟ್ಟಿಕೊಂಡ ಸಾಮಾನ್ಯ ರೈತ ಪ್ರಜೆಗಳ 'ಪ್ರಭುತ್ವ'ದ ಪ್ರತಿನಿಧಿಯಾದ ಕಲ್ಯಾಣಪ್ಪನ ಅಂಕಮಾಲೆಯಂತಿರುವ ಶೀರ್ಷಿಕೆ ಎನ್ನಬಹುದು.

ಈ ಕಾಣ್ಕೆಗೆ ಕಲ್ಯಾಣಪ್ಪನ ಕಾಲದ ಸಮಸ್ಯೆ, ಜನತೆಯ ಆಶೋತ್ತರಗಳು, ನಡೆದು ಬಂದ ದಾರಿ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ರೂಪರೇಖೆಗಳ ಅರಿವು ಪ್ರಧಾನ ಭೂಮಿಕೆಯಾಗುತ್ತದೆ. ಪೂರ್ವಾಗ್ರಹ ರಹಿತ ಮತ್ತು ಪ್ರಜಾಕೇಂದ್ರಿತ ಚರಿತ್ರೆಯ ಆಳವಾದ ಜ್ಞಾನವಿದ್ದಲ್ಲಿ ಮಾತ್ರ ಇದು ಸಾಧ್ಯವಾಗುತ್ತದೆ.

'ಮನುಷ್ಯನೇ ಪರಮ ಸತ್ಯ; ಸಕಲವೂ ಮನುಷ್ಯನಿಗಾಗಿಯೇ' ಎನ್ನುವ ಸತ್ಯವನ್ನು ಗಾರ್ಕಿಯ ಹಾಗೆ ನಿರಂಜನರು ತಮ್ಮ ಅನುಭವದಿಂದ ಕಂಡುಕೊಂಡರು. ಚರಿತ್ರೆಯು ಪ್ರಭುವಿಗಿಂತಲೂ ಮುಖ್ಯವಾಗಿ ಪ್ರಜಾವರ್ಗದ ಪ್ರಗತಿಯ ದಾಖಲಾತಿ. ಪ್ರಜೆಗಳನ್ನು ಮರೆತ ಇತಿಹಾಸದ ಉದ್ದೇಶ ಮಸುಕಾಗುವುದರಲ್ಲಿ ಸಂಶಯವಿಲ್ಲ.

"ಬದುಕಿನ ಚಲನಶೀಲತೆಯ ಬುನಾದಿಯ ಮೇಲೆ ರೂಪಿತವಾಗಿರುವ ಮಾರ್ಕ್ಸಿಸ್ಟ್ ದ್ವಂದ್ವವಾದದ ಚೌಕಟ್ಟಿನಲ್ಲಿ ತಮ್ಮ ಸುತ್ತಮುತ್ತಲಿನ ಜೀವನವನ್ನು

ಅರ್ಥೈಸುತ್ತಾ ಈ ಬದುಕನ್ನು ಆಮೂಲಾಗ್ರವಾಗಿ ಬದಲಾಯಿಸಬಲ್ಲ ಮನುಷ್ಯನಿಗಾಗಿ ನಿರಂಜನರಿಂದ ಸತತ ಹುಡುಕಾಟ." [೨೩]

ನಿರಂಜನರ ಇಂತಹ ಹುಡುಕಾಟದ ತಾತ್ವಿಕ, ಕಲಾತ್ಮಕ ಚೌಕಟ್ಟು ಬಹಳ ಮೂರ್ತವಾಗಿ 'ಕಲ್ಯಾಣಸ್ವಾಮಿ' ಕಾದಂಬರಿಯಲ್ಲಿ ಬಿಂಬಿತವಾಗಿದೆ. ಕಲ್ಯಾಣಸ್ವಾಮಿ ಕಾದಂಬರಿಯಲ್ಲಿ ಜಿಜ್ಞಾಸೆಗೊಳಗಾಗಿರುವ ವಾಸ್ತವತೆ, ರಾಜಕೀಯದಲ್ಲಿ ಮನುಷ್ಯನ ಸಾಧ್ಯತೆ ಮತ್ತು ಕಲ್ಪನೆಗಳನ್ನು ಮುಂದಿಡುತ್ತದೆ.

ಇಲ್ಲಿ ಸಾಮಾನ್ಯ ಪ್ರಜೆಗಳ ಅಸ್ಥಿತ್ವದ ನಡುವೆಯೇ, ಧೀಮಂತ 'ಪ್ರಭು'ಗಳನ್ನು ನೋಡುವ ದೃಷ್ಟಿಕೋನವಿದೆ. ಪ್ರಭುಗಳಲ್ಲೂ, ಪ್ರಜೆಗಳಲ್ಲೂ ನೆಲೆಗಳು ಹಲವಾರು. ಅವು ಸಕರಾತ್ಮಕವಾಗಿಯೂ, ನಕಾರಾತ್ಮಕವಾಗಿಯೂ ನಿರ್ಮಿತಿ ಪಡೆದಿವೆ.

'ಚಿರಸ್ಮರಣೆ' ಕಾದಂಬರಿಯ ನಿರಂಜನರ ಮಾನವ ಪ್ರಜ್ಞೆಯ ಕುರಿತು ವಿಮರ್ಶಕರು ಹೇಳೀರುವಂತೆ, "ನಿರಂಜನರ ಚಾರಿತ್ರಿಕ ಪ್ರಜ್ಞೆ, ಕ್ರಾಂತಿಕಾರಿ ಮನುಷ್ಯನನ್ನು ಸೃಷ್ಟಿಸಬಲ್ಲ ಬದುಕಿನ ಅಂಶಗಳನ್ನು ಗುರುತಿಸಿರುವುದು ಮತ್ತು ಅಂತಹ ಅಂಶಗಳು ಭಾರತದ ಸಂದರ್ಭದಲ್ಲಿ ಕ್ರಾಂತಿಕಾರಿಗಳನ್ನು ನಮ್ಮ ಸುತ್ತಮುತ್ತಲೇ, ಸಾಮಾನ್ಯ ಜನರ ನಡುವೆಯೇ, ಸೃಷ್ಟಿಸಿವೆ ಎಂದು ಕಲಾತ್ಮಕವಾಗಿ ನಿರೂಪಿಸಿರುವುದು ಗಮನಾರ್ಹ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇದು ಒಂದು ಮಹತ್ವದ ಸಾಧನೆ." [೨೪] ಈ ಮಾತುಗಳನ್ನು 'ಕಲ್ಯಾಣಸ್ವಾಮಿ' ಕಾದಂಬರಿಗೂ ಅನ್ವಯಿಸಿ ನೋಡಬಹುದು. ಇದರಿಂದಾಗಿ, ನಿರಂಜನರ ಈ ಕಾದಂಬರಿಯಲ್ಲಿ ಪ್ರಜಾಪ್ರಜ್ಞೆ ಎನ್ನುವುದು ಹೆಚ್ಚಿನ ಕನ್ನಡದ ಕೃತಿಗಳಂತೆ ಭಾವನಾತ್ಮಕ ಚೌಕಟ್ಟಿನಲ್ಲಿ ಹುದುಗಿ ಹೋಗುವ ಬದಲಾಗಿ ನಿಜ ಬದುಕಿನ ಕ್ರಾಂತಿಕಾರಿ ಚಲನಶೀಲತೆ, ಸಕ್ರಿಯತೆಯ ಕೂಸಾಗಿ ಜನ್ಮತಾಳಿದೆ.

'ರೈತ' ಎನ್ನುವ ಪ್ರಜಾ ಪ್ರತಿನಿಧಿ ಇಲ್ಲಿ ನಿರಂಜನರ ವೈಚಾರಿಕತೆಯ ನಾಯಕ. ಏಕೆಂದರೆ ಕಲ್ಯಾಣಸ್ವಾಮಿಯಲ್ಲೂ ಬಂಡಾಯದ ಬಿಸಿ ಏರುವುದು ರೈತರ ಮುಖೇನವೇ. ದೇಶದ ಸಂಪತ್ತಿನ ಉತ್ಪಾದಕರಾಗಿರುವ ಕಾರ್ಮಿಕ ವರ್ಗ, ರೈತಾಪಿ ಕೂಟ ನಿರಂಜನರ ಬಂಡಾಯ ಪ್ರಜ್ಞೆಗೆ ಉತ್ತೇಜಕ ಶಕ್ತಿಗಳಾಗಿದ್ದಾರೆ. ಚಿರಸ್ಮರಣೆ ಕಾದಂಬರಿಯಲ್ಲಿ ಕಯ್ಯೂರಿನಲ್ಲಿ ಸೈನ್ಯಕ್ಕೆ ಸೇರಲು ಕರೆಬಂದಾಗ, ಸೇರಿದವರು 'ರೈತ ಮಕ್ಕಳು' , 'ಮೃತ್ಯುಂಜಯ'ದಲ್ಲೂ ಬಂಡಾಯ ಎದ್ದವರು ರೈತರೇ ಆಗಿದ್ದಾರೆ. ಇವಷ್ಟೇ ಅಲ್ಲದೆ, ಪ್ರಸ್ತುತ 'ಕಲ್ಯಾಣಸ್ವಾಮಿ' ಕಾದಂಬರಿಯಲ್ಲೂ ಬ್ರಿಟಿಷರ ವಿರುದ್ಧ ಪ್ರತಿಭಟನೆಗೆ ಕೈ ಎತ್ತುವವರೂ ರೈತರೇ.

ಇತಿಹಾಸದ ನಿರ್ಮಾತೃಗಳು ಜನರೇ ಎಂಬ ಸಾರ್ವಕಾಲಿಕ ಸತ್ಯವನ್ನು ಮರೆಯದೆ ಈ ಕಾದಂಬರಿಯನ್ನು ರಚಿಸಿದ್ದೇನೆ ಎಂದು 'ಕಲ್ಯಾಣಸ್ವಾಮಿ'ಯ

ಹಿನ್ನುಡಿಯಲ್ಲಿ ಹೇಳಿರುವ ನಿರಂಜನರು ನೈಜವಾಗಿ ವಾಸ್ತವವಾದಿ, ಸಮಾಜವಾದಿ ಲೇಖಕನಿಗಿರಬೇಕಾದ ಪ್ರಜ್ಞೆಯುಳ್ಳವರೆನ್ನಬಹುದು. ನಾನಾ ಭಾಷೆಗಳು, ನಾನಾ ಜಾತಿಗಳ, ಲಿಂಗವಂತರು, ಕೊಡವರು, ಮಾಪಿಳ್ಳೆಯವರು, ಕೊಂಕಣರು, ಬ್ರಾಹ್ಮಣರು ಹೀಗಿದ್ದರೂ ನಾವೆಲ್ಲಾ ಒಂದೇ ಧ್ಯೇಯಕ್ಕಾಗಿ ಒಟ್ಟಾಗಿದ್ದೇವೆ ಎಂದು ಅಲ್ಲೇ ಹೇಳಿಕೊಳ್ಳುವುದು ಸಾರ್ಥಕವಾಗುತ್ತದೆ.

ಇತಿಹಾಸ ರಾಜರಾಣಿಯರ ಚರಿತ್ರೆಯಲ್ಲ, ಬದಲಾಗಿ ಅದು ಜನಸಾಮಾನ್ಯರ ದುಡಿಮೆಯ, ಐಕ್ಯದ, ಹೋರಾಟದ ಬದುಕಿನ ಘಟ್ಟವಾಗಿದೆ. ಈ ದೃಷ್ಟಿಕೋನದಿಂದಲೇ ನಿರಂಜನರು 'ಕಲ್ಯಾಣಸ್ವಾಮಿ' ಕಾದಂಬರಿಯನ್ನು ರಚಿಸಿದ್ದಾರೆ. ಹೀಗೆ ನಿರಂಜನರ ಐತಿಹಾಸಿಕ ಕಾದಂಬರಿಗಳು 'ಗತಿತಾರ್ಕಿಕ'ವಾಗಿ ಜನಪರವಾದ ದೃಷ್ಟಿ ಕೋನದಿಂದಲೇ ರಚನೆಗೊಂಡಿದೆ ಎನ್ನಬಹುದು.

'ಕಲ್ಯಾಣಸ್ವಾಮಿ' ಹಿನ್ನುಡಿಯಾಗಿ ಬರುವ 'ಇತಿಹಾಸ ಮತ್ತು ಸೃಷ್ಟಿ ಸಾಹಿತ್ಯ' ಎಂಬ ಪ್ರಬಂಧದಲ್ಲಿ ನಿರಂಜನರು ಕಾಲಕಾಲಕ್ಕೂ ಬದಲಾಗುತ್ತಾ ಬಂದ ಬದುಕು, ಆಗಿನ ಕಾಲಧರ್ಮ, ಅದರಿಂದ ಪ್ರಭಾವಿತರಾದ ಜನರ ರೀತಿ ನೀತಿಗಳು, ಆ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಶಕ್ತಿಗಳು. ಎನ್ನುತ್ತಾ ಇತಿಹಾಸದ ವಿಶದರೂಪುವನ್ನು ಕಟ್ಟಿಕೊಡುತ್ತಾರೆ. "ಗತಜೀವನದ ಪುನರ್‌ಸೃಷ್ಟಿಯೇ ಐತಿಹಾಸಿಕ ಸಾಹಿತ್ಯ ಕೃತಿಗಳಲ್ಲಿರಬೇಕಾದ ಪ್ರಧಾನ ಅಂಶ" (ಪುಟಗಳು ೧೪೯-೧೫೧) ಎಂದು ತಾವು ಕಂಡುಕೊಂಡ ತಾತ್ವಿಕತೆಯನ್ನು ಜಗತ್ತಿಗೆ ತಿಳಿಹೇಳುತ್ತಾರೆ.

'ಕಲ್ಯಾಣಸ್ವಾಮಿ'ಯಲ್ಲಿ ನಿರಂಜನರು "ಇತಿಹಾಸದ ಸರಳೀಕರಣದೊಂದಿಗೆ ಅಥವಾ ಸರಳೀಕರಣಕ್ಕೆ ಪೂರಕವಾಗಿ ಭಾಷೆಯನ್ನು ಭಾವೋನ್ಮಾದದಿಂದ ದುಡಿಸಿಕೊಂಡಿದ್ದಾರೆ. ಗಂಗವ್ವ ತನ್ನ ಸೊಸೆಯೊಡನೆ ಮಗನಿಗೆ ಹಂಬಲಿಸಿ ಕಾಯುವಾಗ ಕರುಣಾರಸ ಓತಪ್ರೋತವಾಗಿ ಹರಿದರೆ ಅದಕ್ಕೆ ಸರಿಸಮಾನಾಗಿ ಸ್ವಾತಂತ್ರ್ಯ ವೀರರ ಧೈರ್ಯ-ದೇಶಪ್ರೇಮಗಳು ಮೆರೆದಾಡುತ್ತವೆ. ಎಲ್ಲ ಸಂದರ್ಭಗಳೂ ಹೆಚ್ಚು ಕಮ್ಮಿ ನಾಟಕೀಯ (ಮೆಲೊಡ್ರಾಮ)ವಾಗಿಯೇ ಇವೆ. ಪುಟ್ಟ ಬಸಪ್ಪ-ಕಲ್ಯಾಣಸ್ವಾಮಿಯಾಗುವ ಮೊದಲು-ಕೊಡಗಿನ ಕರ್ಮಕಥೆಯನ್ನು ಹೀಗೆ ಹೇಳುತ್ತಾನೆ" [೨೫]

"ಕೊಡಗಿನ ಧಮನಿಯಲ್ಲಿ ಹರಿಯುವುದು ವೀರರಕ್ತವೇ ಅಲ್ಲವೇನು? ಅವರ ಪೀಚುಕತ್ತಿ ಬರಿಯ ಅಲಂಕಾರಕ್ಕೆಂದು ಹೇಳಿದವರು ಯಾರು? ಅವರ ಬಿಚ್ಚುಗತ್ತಿಯ ಅಲಗು ಎಂದು ಮೊಂಡಾಯಿತು? ಅವರ ಗುಲಾಮಗಿರಿಯನ್ನೇ ಅಪ್ಪಿಕೊಳ್ಳ ಬಯಸುವ ಕ್ಷುದ್ರ ಜೀವಿಗಳೇ..........

ಪುಟ್ಟ ಬಸವ ಕಂಪಿಸುತ್ತಿದ್ದ ಧ್ವನಿಯಲ್ಲಿ ಮೈಮರೆತು ಆಡುತ್ತಿದ್ದ ಮಾತುಗಳಿಂದ ಎಲ್ಲರಿಗೂ ರೋಮಾಂಚನವಾಯಿತು. ಅಸಹನೆಯಿಂದ ಪ್ರತಿಯೊಬ್ಬರ ನರನಾಡಿಗಳೂ ಬಿಸಿ ಏರಿದವು. ಬಾಹುಗಳು ಸ್ಫುರಿಸಿದುವು. ರಕ್ತದ ಒತ್ತಡದಿಂದ ಕಣ್ಣು ಕೆಂಪಡರಿದವು......" [೨೬]

ಹಾಗಾಗಿ 'ಕಲ್ಯಾಣಸ್ವಾಮಿ' ಕಾದಂಬರಿಯಲ್ಲಿ ಕಂಡುಬರುವುದು ಭಾವಾವೇಶಪೂರಿತ ನಾಟಕೀಯ ಭಾಷೆ. ಇದೇ ಭಾಷಾ ವೈಖರಿಯನ್ನು 'ಸ್ವಾಮಿ ಅಪರಂಪಾರ' ಕಾದಂಬರಿಯಲ್ಲೂ ಲಕ್ಷ್ಯಿಸಬಹುದಾಗಿದೆ.

**ಟಿಪ್ಪಣಿಗಳು :-**

೧) ರಾಮಚಂದ್ರನ್. ಸಿ.ಎನ್. (ಲೇ) ನಿರಂಜನ ಅಭಿನಂದನ, ೧೯೮೬, ಪುಟ ೨೩೦

೨) ಅದೇ, ಪುಟ – ೨೮೨

೩) ಅದೇ, ಪುಟ – ೨೭೧

೪) ದೇವಿಪ್ರಸಾದ್ ಎನ್.ಎಸ್. ಸಂಪಾಜೆ, ಅಮರ ಸುಳ್ಯದ ಸ್ವಾತಂತ್ರ್ಯ ಸಮರ, ಅಮರ ಕ್ರಾಂತಿ ಸಂಸ್ಮರಣ ಸಮಿತಿ, ಸಂಪಾಜೆ – ೫೭೪೨೩೪, ೨೦೦೫, ಪುಟ–೧೯

೫) ನಿರಂಜನ ಅಭಿನಂದನ, ೧೯೮೬, ಪುಟ ೨೩೨

೬) ಅದೇ, ಪುಟ – ೨೩೨

೭) ಬಸವರಾಜ ಕಲ್ಗುಡಿ, (ಲೇ) ಮಾಸ್ತಿಯವರ ಸಾಹಿತ್ಯ–ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೮೬, ಪುಟ ೧೧೩

೮) ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಚಿಕ್ಕವೀರ ರಾಜೇಂದ್ರ, ಪುಟ ೩

೯) ಅದೇ, ಪುಟ – ೫೫

೧೦) ಅದೇ, ಪುಟ – ೫೬

೧೧) ಅದೇ, ಪುಟ – ೫೬

೧೨) ಅದೇ, ಪುಟ – ೫೬

೧೩) ಅದೇ, ಪುಟ – ೬೧

೧೪) ನಿರಂಜನ ಅಭಿನಂದನ, ಪುಟ ೨೮೨

೧೫) ಅದೇ, ಪುಟ – ೨೭೩

೧೬) ಅದೇ, ಪುಟ – ೨೭೩

೧೭) ಕಲ್ಯಾಣ ಸ್ವಾಮಿ, ಪುಟ ೨೭

೧೮) ಕಲ್ಯಾಣ ಸ್ವಾಮಿ, ಪುಟ ೨೭
೧೯) ಅದೇ, ಪುಟ ೨೮
೨೦) ಅದೇ, ಪುಟ ೨೯
೨೧) ನಿರಂಜನ, ಕಲ್ಯಾಣಸ್ವಾಮಿ, ಪುಟ ೨೯
೨೨) ದೇವಿಪ್ರಸಾದ್.ಎನ್.ಎಸ್. ಸಂಪಾಜೆ, ಅಮರ ಸುಳ್ಯದ ಸ್ವಾತಂತ್ರ್ಯ ಸಮರ, ಪುಟ ೨೭
೨೩) ನಿರಂಜನ ಅಭಿನಂದನ, ಪುಟ ೨೯೦
೨೪) ಅದೇ ೨೯೨
೨೫) ನಿರಂಜನ ಅಭಿನಂದನ, ಪುಟ – ೨೭೪
೨೬) ನಿರಂಜನ, ಕಲ್ಯಾಣಸ್ವಾಮಿ, ಪುಟ ೩೩

# ಉಪಸಂಹಾರ

ಇತಿಹಾಸವೆಂದರೆ ರಾಜರಾಣಿಯರ ಸಾಹಸ-ಸಂಗ್ರಾಮಗಳ ಮಹಿಮಾ ಕಥಾನಕಗಳು ಎಂಬುದು ಜನರಲ್ಲಿ ಸಾಮಾನ್ಯವಾಗಿ ಬೇರೂರಿರುವ ಕಲ್ಪನೆಯಾಗಿದೆ. 'ಪ್ರಭು'ವಲ್ಲದ ಸಾಮಾನ್ಯ 'ಪ್ರಜಾ' ಪಾತ್ರವೊಂದು ನಾಡಿನ ವಿಜಯಕ್ಕಾಗಿ ಹೋರಾಟಕ್ಕಿಳಿದು ಬಲಿದಾನವಾದರೆ ಅದು ಆ ಪಾತ್ರವನ್ನು ಅಧೀನವಾಗಿಸಿದ ಅಧಿಕಾರಶಾಹಿಗಳ ಕೀರ್ತಿಗೆ ಕಾರಣವಾಗುತ್ತದೆಯೇ ಹೊರತು ಆ ಸಾಮಾನ್ಯ ವ್ಯಕ್ತಿಯನ್ನು ಉನ್ನತೀಕರಿಸುವುದಿಲ್ಲ ಆ ಬಲಿದಾನ ವೀರ ಮರಣವೆಂದೋ ನಾಡಿಗಾಗಿ ನಡೆದ ಪರಮತ್ಯಾಗವೆಂದೋ ಕರೆಸಿಕೊಳ್ಳುವುದಿಲ್ಲ. ಯುದ್ಧ ಮತ್ತು ವಿಜಯ ಇವುಗಳೊಂದಿಗೆ ಸಮಗ್ರ ರಾಜ್ಯಾಡಳಿತದ ಯಶಸ್ಸು ಇವೆಲ್ಲವೂ ಅರಸನೊಬ್ಬನಿಂದಲೇ ಸಾಧಿತಗೊಂಡ ಒಂದು ಐತಿಹಾಸಿಕ ದಾಖಲೆ ಎಂಬಂತೆ ಬರೆಯಲಾಗಿದೆ. ರಾಜನಷ್ಟೇ ಪ್ರಬಲವಾಗಿ ಕೆಲವೊಮ್ಮೆ ಅವನಿಗಿಂತಲೂ ಮಿಗಿಲಾಗಿ ರಾಜ್ಯಾಡಳಿತದಲ್ಲಿ ಪಾಲ್ಗೊಂಡು ತಮ್ಮ ಪ್ರಾಣವನ್ನೇ ಪ್ರಭುವಿಗಾಗಿ ಸಮರ್ಪಿಸಿಕೊಂಡ ಅವೆಷ್ಟೋ ನೈಜ ವೀರರ ಕಥಾನಕಗಳು ನಿರ್ಲಕ್ಷ್ಯಕ್ಕೊಳಗಾಗಿವೆ.

ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಅಂಚಿಗೆ ತಳ್ಳಲ್ಪಟ್ಟ ಸಮೂದಾಯಗಳ ಸಂಸ್ಕೃತಿ, ಚರಿತ್ರೆ, ಸಾಹಿತ್ಯ, ಭಾಷೆ ಮುಂತಾದ ನೆಲೆಗಳಲ್ಲಿನ ಹೊಸ ಓದುಗಳು ಆರಂಭವಾಯಿತು. ಸಮಾಜ ಚರಿತ್ರೆಯನ್ನು 'ತಳದಿಂದ ನೋಡುವ', ವಿಮರ್ಶಿಸುವ ಪ್ರಯತ್ನವಾಗಿ ಬೆಳಕಿಗೆ ಬಂದವು. ಇಂತಹ ಮಾದರಿಯನ್ನು 'ಸಬಾಲ್ಟರ್ನ್ ಸ್ಟಡೀಸ್' ಎಂದು ಕರೆಯಲಾಗಿದ್ದು, ಅಲಕ್ಷಿತ ಸಮುದಾಯವನ್ನು ಮುಖ್ಯವಾಹಿನಿಯಲ್ಲಿ ಕಂಡುಕೊಳ್ಳುವುದು ಇದರ ಪ್ರಮುಖ ಧೋರಣೆ.

ಪ್ರಸ್ತುತ ಅಧ್ಯಯನವು ಸಬಾಲ್ಟರ್ನ್ ಧೋರಣೆಯಲ್ಲಿ ಕೆಳವರ್ಗದ ಪ್ರತಿಭಟನೆ ಮತ್ತು ಕೊಡಗು-ಕನ್ನಡ ಜಿಲ್ಲೆಗಳ ರೈತ ಬಂಡಾಯ ಕಾಲದ ಚರಿತ್ರೆಯನ್ನು ತಳದಿಂದ ಕಟ್ಟುವ 'ಹಿಸ್ಟರಿ ಫ್ರೋಮ್ ಬಿಲೋ' ಮಾದರಿಯನ್ನು ಲಕ್ಷ್ಯಿಸುತ್ತದೆ. 'ಕಲ್ಯಾಣಸ್ವಾಮಿ' ಎನ್ನುವ ಹೆಸರಿನ ಪಾತ್ರ ಮತ್ತು ಕಾದಂಬರಿಗಳ ನಡುವಣ ಅನುಸಂಧಾನವನ್ನು ಏರ್ಪಡಿಸಿ ಆ ಮೂಲಕ ಚರಿತ್ರೆ ಮತ್ತು ಸಾಹಿತ್ಯದ ನಡುವಣ ಸಂಬಂಧದ ನೆಲೆಗಳನ್ನು ಶೋಧಿಸುತ್ತದೆ.

'ಪ್ರಭು' ಪ್ರಧಾನವಿಲ್ಲದ ಸಬಾಲ್ಟರ್ನ್ ಓದಿನ ಕಾದಂಬರಿಯಾದ ನಿರಂಜನರ 'ಕಲ್ಯಾಣಸ್ವಾಮಿ'ಯ ರಾಷ್ಟ್ರೀಯ ವ್ಯಾಪ್ತಿಯುಳ್ಳ ಪ್ರಾದೇಶಿಕ ಕಥೆಯನ್ನು ಇಟ್ಟುಕೊಂಡು ಸ್ಥಳೀಯ ಚರಿತ್ರೆಯನ್ನು ಕಟ್ಟುವ ಪ್ರಯತ್ನವನ್ನು ಈ ಅಧ್ಯಯನ ನಡೆಸುತ್ತದೆ.

'ಕಲ್ಯಾಣಸ್ವಾಮಿ'ಯ ಬಂಡಾಯ ಕಥಾನಕಗಳನ್ನು ಒಳಗೊಂಡು ಇಲ್ಲವೇ ಆಧರಿಸಿ ಬಂದ ಹಲವು ಸೃಜನಶೀಲ ಕೃತಿಗಳು ಮತ್ತು ಸಂಶೋಧನೆಗಳ ಸಮೀಕ್ಷೆ ಕೈಗೊಂಡು, ಅವೆಲ್ಲದರಲ್ಲಿ ಪರಿಕಲ್ಪಿತಗೊಂಡ ಬಂಡಾಯದ ಹೊಸ 'ಸಾಧ್ಯತೆ'ಯೊಂದನ್ನು ಹುಡುಕಲಾಗಿದೆ.

ಸಂಪ್ರಬಂಧದ ಪ್ರಸ್ತಾವನೆಯಾಗಿ ಪ್ರಸ್ತುತ ಅಧ್ಯಯನದ ವ್ಯಾಪ್ತಿ, ವಿಷಯ, ಪ್ರಸ್ತುತತೆ, ವಿಧಾನ ಮತ್ತು ಉದ್ದೇಶಗಳ ಬಗ್ಗೆ ಸ್ಪಷ್ಟಪಡಿಸಲಾಗಿದೆ. ಜಾಗತೀಕರಣದ ಸನ್ನಿವೇಶದಲ್ಲಿ ಸ್ಥಳೀಯ, ದೇಶಿ ಸಂಸ್ಕೃತಿ-ಇತಿಹಾಸಗಳ ಅಧ್ಯಯನದಲ್ಲಿ ಆಸಕ್ತಿ ಹೆಚ್ಚಾಗಿರುವುದಕ್ಕೆ ಕಾರಣಗಳನ್ನು ಚರ್ಚಿಸಲಾಗಿದೆ.

ಸ್ಥಳೀಯ ಚರಿತ್ರೆಯ ಅಧ್ಯಯನದ ಮಹತ್ವ ಮತ್ತು ಅನಿವಾರ್ಯತೆ, ಅದರ ಮಹತ್ವ, ಸ್ಥಳೀಯ ಅನನ್ಯತೆ, ಅಸ್ಮಿತೆಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ಇತಿಹಾಸ ಎಂಬುದು ಆಯಾ ಕಾಲದ ಸಾಹಿತ್ಯದಿಂದಲೂ, ಸಾಹಿತ್ಯ ಎಂಬುದು ಆಯಾ ಕಾಲದ ಇತಿಹಾಸದಿಂದಲೂ ಪ್ರೇರಿತವಾದವು. ಸಾಹಿತ್ಯ ಕೃತಿಯೊಂದನ್ನು ಅದು ಒಳಗೊಳ್ಳುವ ಚಾರಿತ್ರಿಕ ಸನ್ನಿವೇಶದ ನೆಲೆಯಿಂದ ವಿಶ್ಲೇಷಿಸುವ ಉದ್ದೇಶವನ್ನು ಈ ಪ್ರಬಂಧ ಇಟ್ಟುಕೊಂಡಿರುವ ಕಾರಣ ಇತಿಹಾಸ ಅಥವಾ ಚರಿತ್ರೆ ಮತ್ತು ಸಾಹಿತ್ಯ ಕೃತಿಗಳ ನಡುವಣ ಸಂಬಂಧದ ಬೇರೆ ಬೇರೆ ನೆಲೆಗಳನ್ನು ಕಂಡುಕೊಳ್ಳುವುದು ಇಲ್ಲಿನ ಅವಶ್ಯವಾಗಿದೆ. ಇವೆರಡೂ ಒಂದಕ್ಕೊಂದು ಪೂರಕ-ಪ್ರೇರಕ, ಒಂದು ಇನ್ನೊಂದಕ್ಕೆ ಸಾಮಾಗ್ರಿ. ಈ ಒಳನೋಟಕ್ಕಾಗಿ ಇತಿಹಾಸ ಮತ್ತು ಸಾಹಿತ್ಯದ ಬಗೆಗೆ ವಿದ್ವಾಂಸರ ವ್ಯಾಖ್ಯೆ, ಅಭಿಪ್ರಾಯಗಳನ್ನು ಕ್ರೋಢೀಕರಿಸಿ ವಿಶ್ಲೇಷಿಸುವ ಪ್ರಯತ್ನ ಎರಡನೇ ಅಧ್ಯಾಯದಲ್ಲಿ ನಡೆದಿದೆ.

ನಿರಂಜನರ ಈ 'ಕಲ್ಯಾಣಸ್ವಾಮಿ' ಒಂದು ಐತಿಹಾಸಿಕ ಕಾದಂಬರಿಯಾದ ಕಾರಣ ಕನ್ನಡದಲ್ಲಿ ಚಾರಿತ್ರಿಕ ಕಾದಂಬರಿಗಳ ಉದಯ ಮತ್ತು ಬೆಳವಣಿಗೆಗಳ ಬಗ್ಗೆ ಚರ್ಚೆ ನಡೆಸಲಾಗಿದೆ.

ಕಲ್ಯಾಣಸ್ವಾಮಿಯ ಕುರಿತು ಈ ವರೆಗೆ ಬಂದಿರುವ ಮೌಖಿಕ ಮತ್ತು ಲಿಖಿತ ದಾಖಲೆಗಳೆರಡನ್ನೂ ಪರಾಮರ್ಶಿಸಿ, ಅವು ಕಟ್ಟಿಕೊಡುವ ಸ್ಥಳೀಯ ಚರಿತ್ರೆಗಳ ನಡುವೆ ಒಂದು ಅನುಸಂಧಾನವನ್ನು ಕೈಗೊಳ್ಳುವ ಉದ್ದೇಶ ಈ ಅಧ್ಯಯನಕ್ಕಿದ್ದು, ಈ ದಾಖಲೆಗಳ ತಪ್ಪುಗ್ರಹಿಕೆಯನ್ನು ಬದಲಾವಣೆಗೊಡ್ಡಿ, ಆತನ ಕ್ರಾಂತಿ-ಸಾಧನೆಗಳ ಅಂತರ್ ಮುಖಗಳನ್ನು ಬೆಳಕಿಗೆ ತರುವಲ್ಲಿ ಇದು ಮಹತ್ವದ ಹೆಜ್ಜೆ. ಪ್ರಾದೇಶಿಕವಾಗಿ ಕ್ರಾಂತಿ ನಡೆಸಿರುವ ಒಬ್ಬ ಹೋರಾಟಗಾರನ ವಿದ್ಯಮಾನಗಳನ್ನು ಆಧಾರವಾಗಿಟ್ಟುಕೊಂಡು ಸ್ಥಳೀಯ ಚರಿತ್ರೆಯ ವಿವಿಧ ಸಾಧ್ಯತೆಗಳನ್ನು ಕಂಡುಕೊಳ್ಳಲಾಗಿದೆ. ನಿರಂಜನರು 'ಕಲ್ಯಾಣಸ್ವಾಮಿ' ಕಾದಂಬರಿಯ ಮೂಲಕ ಆತನ

ಬಗೆಗೆ ನೀಡುವ ವಿಶದೀಕರಣದ ಮುಂದುವರಿದ ಕಾರ್ಯವೆಂದೂ ಹೇಳಬಹುದು. ಈ ಸಂಬಂಧಿತ ದಾಖಲೆಗಳ ಜೊತೆಗೆ ಸ್ಥಳೀಯ ಚರಿತ್ರೆಯನ್ನು ಮುಖಾಮುಖಿಗೊಳಿಸಿ ಕಲ್ಯಾಣಸ್ವಾಮಿ ಕೇಂದ್ರಿತ ಹೊಸ ಸ್ಥಳೀಯ ಚರಿತ್ರೆಯನ್ನು ಸೃಷ್ಟಿಸಲಾಗಿದೆ. ಇತಿಹಾಸವನ್ನು ಕಾಣುವ ಮತ್ತು ಅಧ್ಯಯನ ಮಾಡುವ ಒಂದು ವಿನೂತನ ಸಾಧ್ಯತೆಯಿದು.

ಅಲ್ಲದೆ, ಸ್ಥಳೀಯ ಚರಿತ್ರೆ ಮತ್ತು ಸಬಾಲ್ಟರ್ನ್ ಸ್ಟಡೀಸ್‌ಗೆ ಸಂಬಂಧಿಸಿದ ವಿವಿಧ ಕೃತಿಗಳನ್ನು ಅಧ್ಯಯನ ನಡೆಸಿ, ಆ ಮೂಲಕ ಕಲ್ಯಾಣಸ್ವಾಮಿಯ ಕುರಿತಾಗಿರುವ ಈ ವರೆಗಿನ ವಿಚಾರ ಸರಣಿಗಳಿಗೆ ಪ್ರವೇಶ ಪಡೆಯಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ 'ಕಲ್ಯಾಣಸ್ವಾಮಿ'ಯನ್ನು ಕುರಿತ 'ಸ್ಥಳೀಯ ಚರಿತ್ರೆ' ಹೇಗೆ ಮುಖ್ಯ ಆಧಾರವೋ, ಅದೇ ರೀತಿ ಸಾಹಿತ್ಯಿಕ ದಾಖಲೆಗಳೂ ಪ್ರಮುಖ ಆಧಾರವಾಗಿದೆ. ಅದರಲ್ಲೂ ನಿರಂಜನರ ಕಾದಂಬರಿಯನ್ನು ಆಕರ ಕೃತಿಯನ್ನಾಗಿ ಪರಿಗಣಿಸಿರುವ ಈ ಅಧ್ಯಯನ ಕಾರ್ಯದಲ್ಲಿ ತತ್ಕೃತಿಯ ವಿಮರ್ಶಾತ್ಮಕ ಅಂತರ್ನೋಟಗಳನ್ನು ತೆರೆದಿಡುವುದು ಅಗತ್ಯ. ಕೃತಿಯ ವಿಮರ್ಶೆಯೊಂದಿಗೆ, ಅದಕ್ಕೆ ಪೂರಕ ಪಠ್ಯದಂತಿರುವ ಮಾಸ್ತಿಯವರ ಕಾದಂಬರಿಯೂ ಸೇರಿದಂತೆ ಇನ್ನಿತರ ಸಾಹಿತ್ಯಿಕ ಕೃತಿಗಳಲ್ಲಿ ಚಿತ್ರಿತಗೊಂಡ ಇದೇ ಕಥೆಯ ವಿಭಿನ್ನ ಪರಿಕಲ್ಪನೆಗಳನ್ನು ಜೊತೆ ಜೊತೆಗಿಟ್ಟುಕೊಂಡು ಸಂಬಂಧ ಮತ್ತು ಅಂತರಗಳನ್ನು ಗುರುತಿಸಲಾಗಿದೆ.

ಕೊಡಗು ಮತ್ತು ಸುಳ್ಯ–ಪುತ್ತೂರಿನ–ಪ್ರದೇಶಗಳಲ್ಲಿ ಸಕಾರಾತ್ಮಕವಾಗಿ ಚಿತ್ರಿತಗೊಂಡ ಕಲ್ಯಾಣಸ್ವಾಮಿಯ ಬಂಡಾಯ, ಅದರಿಂದೀಚೆಗೆ ವಿಟ್ಲ ಹಾಗೂ ಕುಂಬಳೆ ಸೀಮೆಯ ವರೆಗೆ ಸಂಪೂರ್ಣ ಋಣಾತ್ಮಕವಾಗಿ ಬದಲಾಗುವುದಕ್ಕೆ ವಿವಿಧ ಮೂಲ ಕಾರಣಗಳನ್ನು ಶೋಧಿಸಲಾಗಿದೆ.

ಸಾಹಿತ್ಯಿಕ ವಿಮರ್ಶೆ ಸಾಮಾನ್ಯ ಕ್ರಮದಲ್ಲಿ ಕೈಗೊಳ್ಳುವುದಕ್ಕಿಂತ ಬದಲಾಗಿ, ಕಾದಂಬರಿ ಮತ್ತು ಆ ಕಥಾನಕವನ್ನು ಪ್ರಭುತ್ವ ಮತ್ತು ಪ್ರಜಾಪ್ರಭುತ್ವ ಎಂಬೆರಡು ಮುಖ್ಯ ನೆಲೆಗಳ ಪರಿಕಲ್ಪನೆ ಕೇಂದ್ರಿತ ವಿಮರ್ಶೆಯನ್ನು ನಡೆಸುತ್ತದೆ.

ಕಾದಂಬರಿಯಲ್ಲಿ ದೇಸೀ ರಾಜಶಾಹಿ ಪ್ರಭುತ್ವ ಮತ್ತು ವಸಾಹತುಶಾಹಿ ಪ್ರಭುತ್ವ ಎಂಬ ಎರಡು ಬಗೆಗಿನ ಪ್ರಭುತ್ವ ಚಿತ್ರಣಗಳಿದ್ದು ಅವೆರಡು ಒಪ್ಪಿತ ಯಜಮಾನ್ಯ ಹಾಗೂ ಒತ್ತಾಯದ ಯಜಮಾನ್ಯ ಎಂಬ ಎರಡು ನೋಟಗಳಲ್ಲಿ ವಿಮರ್ಶೆಗೆ ಒಳಗಾಗಿವೆ. ಪ್ರಭುತ್ವದ ಪ್ರಾಬಲ್ಯ ಮತ್ತು ಪ್ರಭುತ್ವದ ನಿರಸನಗಳ ಧೋರಣೆಯಿರುವ ಪ್ರಸ್ತುತ ಕಾದಂಬರಿಯ ಕಥೆ ಮತ್ತು ಸ್ಥಳೀಯ ಚರಿತ್ರೆಯ ಕಥೆಗಳ ತೌಲನಿಕ ವಿಮರ್ಶೆಯೊಂದಿಗೆ, ಅವುಗಳ ನಡುವಿನ ಹೋರಾಟದ ಬೇರೆ ಬೇರೆ ಸಾಧ್ಯತೆಗಳನ್ನು ತರ್ಕಿಸುತ್ತದೆ.

ಸೃಜನಶೀಲ ರಚನೆಯಾಗಿ ನಿರಂಜನರ ಕಾದಂಬರಿಯನ್ನು ಮತ್ತು ಕಲ್ಯಾಣಸ್ವಾಮಿ ಸ್ಥಳೀಯ ಚರಿತ್ರೆಯನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಡಿಸುವುದರೊಂದಿಗೆ ಎರಡು ಆಕರಗಳೂ ರೂಪುಗೊಳಿಸುವ 'ಕಲ್ಯಾಣಸ್ವಾಮಿ' ಯ ಚರಿತ್ರೆಯ ಸ್ಥೂಲ ಬಹುಮುಖ ಸ್ವರೂಪವನ್ನು ಸಂಶೋಧಿಸುವ ಗುರಿಯೂ ಇದಕ್ಕಿದೆ. ಇದು ರಾಜ ಪ್ರಭುತ್ವ ಮತ್ತು ಪ್ರಜಾ ಪ್ರಭುತ್ವ ಎಂಬ ಎರಡು ನೆಲೆಗಳಲ್ಲಿ 'ಕಲ್ಯಾಣಸ್ವಾಮಿ'ಯ ಚಾರಿತ್ರಿಕ ಹಾಗೂ ಸಾಹಿತ್ಯಿಕ ಕಥಾನಕವನ್ನು ಬಿಡಿ-ಬಿಡಿಯಾಗಿ ಪರಿಶೋಧಿಸಿ, ಕೊನೆಗೆ ಇವೆರಡೂ ಒಂದು ಹೊಸ ಸಂಯುಕ್ತ ರೂಪದಲ್ಲಿ ಫಲಿತಗಳನ್ನು ಕೊಡುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಚರಿತ್ರೆ ಮತ್ತು ಸಾಹಿತ್ಯಗಳೆಂಬ ಎರಡು ದರ್ಪಣಗಳಲ್ಲಿ ಕಲ್ಯಾಣಸ್ವಾಮಿಯ ಹೊಸ ಮುಖವನ್ನು ತೆರೆದಿಡುವ ಅವಕಾಶವಾಗಿದೆ. ಈ ಹಾದಿಯಲ್ಲಿ ರಾಜೇತರವೂ ಅಧೀನ ಪಾತ್ರ ಕೇಂದ್ರಿವೂ, ಆದ ತಳ ಸಮೂದಾಯದ ಸಬಾಲ್ಟರ್ನ್ ಚರಿತ್ರೆಯನ್ನು ಕಾಣುವ ಹೊಸ ದೃಷ್ಟಿ ಬೀರಲಾಗಿದೆ. ಸ್ಥಳೀಯ ಚರಿತ್ರೆಯ ಮೂಲಕ ರಾಷ್ಟ್ರ ಚರಿತ್ರೆ ಕಟ್ಟುವ ಹಾಗೆಯೇ ರಾಷ್ಟ್ರ ಚರಿತ್ರೆಯಲ್ಲಿ ಸ್ಥಳೀಯ ಚರಿತ್ರೆಯನ್ನು ಪರಿಗಣಿಸುವ ಅವಶ್ಯಕತೆಯನ್ನು ಮನಗಾಣಲಾಗಿದೆ.

ಚರಿತ್ರೆ ಮತ್ತು ಸಾಹಿತ್ಯದ ಅರ್ಥ ಸಾಧ್ಯತೆ, ಐತಿಹಾಸಿಕ ಕಾದಂಬರಿಗಳ ಅರ್ಥ, ಬೆಳೆದು ಬಂದ ದಾರಿ, ಸ್ಥಳೀಯ ಚರಿತ್ರೆಯ ಅಗತ್ಯತೆ, ಲಿಖಿತ ಮತ್ತು ಮೌಖಿಕ ಚರಿತ್ರೆಗಳ ದಾಖಲೆಗಳು, ಪ್ರಭುತ್ವ ಮತ್ತು ಪ್ರಜಾ ಕೇಂದ್ರಿತ ಸಾಹಿತ್ಯಿಕ ವಿಮರ್ಶೆ ಇವೆಲ್ಲವನ್ನು ವ್ಯವಸ್ಥಿತವಾಗಿ ಜೋಡಿಸಿಕೊಂಡು, ಕಲ್ಯಾಣಸ್ವಾಮಿಯ ಚರಿತ್ರೆಯ ಮೇಲೆ ಬೆಳಕು ಚೆಲ್ಲಲಾಗಿದೆ. ಕಲ್ಯಾಣಸ್ವಾಮಿಯ ಬಂಡಾಯವನ್ನು ರಾಷ್ಟ್ರಚರಿತ್ರೆಯಲ್ಲಿ ಪ್ರಮುಖವೆಂದು ಪರಿಭಾವಿಸಿ, ಅದರ ಮೂಲ ಕಾರಣ, ಹಿನ್ನಲೆ, ಪರಿಣಾಮಗಳನ್ನು ಹುಡುಕಾಡುತ್ತದೆ. ಇದರ ಫಲಿತಗಳನ್ನು ಕಲ್ಯಾಣಸ್ವಾಮಿಯ ಸಾಹಿತ್ಯಿಕ ದಾಖಲೆಗಳ ಜೊತೆ ಅನುಸಂಧಾನ ನಡೆಸಿ, ಹೊಮ್ಮುವ ಸತ್ಯಾಸತ್ಯತೆಗಳನ್ನು ವಿವೇಚಿಸಲಾಗಿದೆ.

೧೮೩೭ರಲ್ಲಿ ರೈತರ ದೊಡ್ಡ ಗುಂಪು ಧಾರ್ಮಿಕ ಧುರೀಣರಂತೆ ನಟಿಸಿ ವಸಾಹತು ಶಾಹಿಯನ್ನು ಸಫಲವಾಗಿ ಎದುರಿಸಿ ನಿಂತರು. ಇಂದಿನ ಧಾರ್ಮಿಕ ನಾಯಕರು ಸಾಮಾನ್ಯ ರೈತಾಪಿ ವರ್ಗದ ಜೊತೆಗೆ ಸೇರಿಕೊಂಡು, ಅವ್ಯಾಹತವಾಗಿ ದಾಳಿ ಮಾಡುತ್ತಿರುವ ಜಾಗತೀಕರಣವೆಂಬ ವಾಣಿಜ್ಯ ಮತ್ತು ಸಾಂಸ್ಕೃತಿಕ ವಸಾಹತುವಾದವನ್ನು ಪ್ರಾಮಾಣಿಕವಾಗಿ ಎದುರಿಸಬೇಕಾಗುತ್ತದೆ ಎಂಬ ನಿರ್ಣಯವನ್ನು ಈ ಅಧ್ಯಯನ ನೀಡುತ್ತದೆ.

ಬ್ರಿಟಿಷ್ ಆಮಿಷಗಳಿಗೆ ಬಲಿಯಾದ ಮತ್ತು ಅವರಿಂದ ಲಾಭಗಿಟ್ಟಿಸಿಕೊಂಡ ಸ್ಥಳೀಯರಲ್ಲಿ ಅನೇಕರು ಕಲ್ಯಾಣಸ್ವಾಮಿಯ ಬಂಡಾಯವನ್ನು ಒಂದು 'ಕಾಟ್‌ಕಾಯಿ' ಎಂಬಂತೆ ನಂಬಿಸುವಲ್ಲಿ ಯಶಸ್ವಿಯಾದರು. ವಸಾಹತುಶಾಹಿಗಳಿಂದ ಹೆಚ್ಚು ಪ್ರಯೋಜನ ಪಡೆದ ಕೆಲವು ವರ್ಗಗಳು ತಮ್ಮ ಕಡೆಯವರಿಂದಲೇ ಲೂಟಿ, ದರೋಡೆ ನಡೆಸಿ, ಅದನ್ನು ಬಂಡಾಯ ಪರಿಣಾಮವೆಂಬಂತೆ ಕತೆಗಟ್ಟಿದರು. ಅವರ ಆಮಿಷಕ್ಕೆ ಬಲಿಯಾಗಿ ಬಂಡಾಯಗಾರರ ಪ್ರಮುಖ ನಾಯಕರುಗಳನ್ನು ಸ್ಥಳೀಯರು ಹಿಡಿದುಕೊಟ್ಟದ್ದರಿಂದ ಕಲ್ಯಾಣಸ್ವಾಮಿಯ ಬಂಡಾಯವು ಆಮೂಲಾಗ್ರವಾಗಿ ಕೊನೆಗೊಂಡಿತು.

**ಅಧ್ಯಯನದ ಫಲಿತಗಳು:**

೧. ಇತಿಹಾಸವು ಮಾನವ ಜೀವನದ ದಾಖಲೆಯಾದರೆ ಸಾಹಿತ್ಯವು ಅದರ ಪ್ರತಿಬಿಂಬ. ಸಾಹಿತ್ಯವೆಂಬುದಕ್ಕೆ ಚರಿತ್ರೆಯೇ ಆಧಾರ. ನಿರಂಜನರ ಬಹುದಿನಗಳ ನಿರಂತರ ಚಾರಿತ್ರಿಕ ಅಧ್ಯಯನದ ಫಲವಾಗಿ ಕಲ್ಯಾಣಸ್ವಾಮಿಯ ಪಾತ್ರವನ್ನು ಅವರು ತಮ್ಮ ಕಾದಂಬರಿಯಲ್ಲಿ ಕಂಡುಕೊಳ್ಳಲು ಸಾಧ್ಯವಾಯಿತು. ಹಾಗೆಯೇ ಚರಿತ್ರೆಗೆ ಸಾಹಿತ್ಯವೂ ಆಧಾರವಾಗುತ್ತದೆ ಎನ್ನುವುದನ್ನು ಈ ಅಧ್ಯಯನ ಸಾಕ್ಷೀಕರಿಸುವ ಪ್ರಯತ್ನ ಮಾಡುತ್ತದೆ. ಕಾದಂಬರಿಯಲ್ಲಿ ವ್ಯಕ್ತಿಯಾಗಿರುವ ಪುಟ್ಟ ಬಸವ ಸ್ಥಳೀಯ ಚರಿತ್ರೆಯಲ್ಲಿ 'ಕಲ್ಯಾಣಸ್ವಾಮಿ'ಯಾಗಿ ರೂಪುಗೊಳ್ಳುವ ಹಾದಿಯ ಮೇಲೆ ಬಹುನೆಲೆಯ ಒಳನೋಟಗಳನ್ನು ನೀಡುತ್ತದೆ.

೨. ನಮ್ಮ ರಾಷ್ಟ್ರೀಯ ಚರಿತ್ರೆಯಲ್ಲಿ ವಿಜೃಂಭಿತ ಬಹುತೇಕ ಅರಸರ ವಿಜಯಗಳು ಅವರಿಗಿಂತಲೂ, ಅವರ ಅಧೀನ ವೀರರಿಂದ ಪ್ರಾಪ್ತವಾದದ್ದು. ಅರಸರಷ್ಟೇ ಪ್ರಬಲವಾಗಿ ಕೆಲವೊಮ್ಮೆ ಅವರಿಗಿಂತಲೂ ಮಿಗಿಲಾಗಿ ಹೋರಾಡಿದ ಅನೇಕರ ಸಾಹಸಗಳು ಅವರ ನಾಯಕನ ಹೆಸರಿನಲ್ಲಿ ದಾಖಲಾಗಿವೆ. ಇದರಿಂದಾಗಿ ಅಧಿಕಾರ ರಹಿತರೆಂಬ ಕಾರಣಕ್ಕೆ ಬಹುಸಂಖ್ಯೆಯ ನೈಜ ವೀರರ ಮಹಿಮಾ ಕಥಾನಕಗಳು ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಇದು ಇತಿಹಾಸವನ್ನು ಕಟ್ಟುವ ಪೂರ್ವಾಗ್ರಹ ಪೀಡಿತ ಕ್ರಮ. ಚಿಕ್ಕವೀರರಾಜೇಂದ್ರನ ಆಡಳಿತಾವಧಿ ಎಂದು ಕರೆಯಲಾಗುವ ೧೮೩೦ ಆಸುಪಾಸಿನ ಅವಧಿಯನ್ನು 'ಕಲ್ಯಾಣಸ್ವಾಮಿ ಕಾಲಘಟ್ಟ' ಎಂದು ಗುರುತಿಸಿರುವುದೇ ಈ ಅಧ್ಯಯನದ ಮಹತ್ವದ ಫಲಿತವಾಗಿದೆ.

೩. ಧಾರ್ಮಿಕ ವೇಷಧಾರಿಯಾದರೂ, ಧಾರ್ಮಿಕ ವಲಯದಲ್ಲಿ ಕಲ್ಯಾಣಪ್ಪ ಪ್ರಸಿದ್ಧನಲ್ಲ. ಇದೇ ಕಾರಣಕ್ಕಾಗಿ ಜನಪದರು ಈತನ ಕಥಾನಕಗಳನ್ನು ಮೌಖಿಕವಾಗಿ ಭವಿಷ್ಯಕ್ಕೆ ದಾಟಿಸುವ ಶ್ರದ್ಧೆ–ಆಸಕ್ತಿ ವಹಿಸಲಿಲ್ಲ. ಇದು

ಕಲ್ಯಾಣಸ್ವಾಮಿಯ ಬಂಡಾಯವನ್ನು ವರ್ತಮಾನವು ನೆನಪಿಸಲು ಕೂಡಾ ಸಾಧ್ಯವಾಗದಂತೆ ಮಾಡಿದೆ. ಹಾಗಾಗಿಯೇ ಆ ಬಗ್ಗೆ ನಿರ್ಲಕ್ಷ್ಯ, ಮರೆವು, ತಪ್ಪು ಗ್ರಹಿಕೆಗಳು ಹುಟ್ಟಲು ಅವಕಾಶವಾಗಿದೆ.

## ಅನುಬಂಧ – ೧

### ಪರಾಮರ್ಶನ ಗ್ರಂಥಗಳು:–


೧) ಅಮೂರ.ಜಿ.ಆರ್, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಶ್ರೀ ಹರಿ ಪ್ರಕಾಶನ, ಧಾರವಾಡ, ೧೯೯೪.

೨) ಆಲೆಟ್ಟಿ ರಾಮಣ್ಣ ಶಗ್ರಿತ್ತಾಯ, 'ಕಲ್ಯಾಣಪ್ಪನ ಕಾಟಕಾಯಿ' ಯಕ್ಷಗಾನ ಪ್ರಸಂಗವು, ರಾಷ್ಟ್ರಬಂಧು ಪ್ರೆಸ್, ಮಂಗಳೂರು, ೧೯೫೬.

೩) ಉಷಾದೇವಿ.ಸಿ.ಜಿ, ಕನ್ನಡದಲ್ಲಿ ಐತಿಹಾಸಿಕ ನಾಟಕಗಳು, ತಾರಾ ಪ್ರಿಂಟಿಂಗ್ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೩

೪) ಉದಯವರ್ಮರಾಜ, ತುಳುನಾಡಿನ ಗತವೈಭವ, ಕನ್ನಡ ಸಾಹಿತ್ಯ ಪರಿಷತ್ತು, ಕೇರಳ ವಿಶೇಷ ಘಟಕ, ಕಾಸರಗೋಡು ೧೯೯೮

೫) ಕಬ್ಬನ್ ವರದಿ, ಪೂರ್ವೋಕ್ತ ೧೮೨೭

೬) ಕೃಷ್ಣರಾಯ.ಶಾ.ಮಂ. (ಪ್ರ.ಸಂ) ತರಾಸು ಬದುಕು–ಬರಹ ದುರ್ಗಾಸ್ತಮಾನ, ಶಿವರಾಮ ಕಾಡನಕುಪ್ಪೆ (ಲೇ) ಪುಟ ೮೦೨.

೭) ಕೃಷ್ಣಯ್ಯ.ಡಿ.ಎನ್, 'ಕೊಡಗಿನ ಇತಿಹಾಸ', ಪ್ರಸಾರಾಂಗ, ಮೈಸೂರು ವಿ.ವಿ. ೧೯೭೪

೮) ಕೇಶವ ಕೃಷ್ಣ ಕುಡ್ವ, ಪೂರ್ವೋಕ್ತ, ೧೯೪೮

೯) ಕೇಶವ ಕೃಷ್ಣ ಕುಡ್ವ, ದಕ್ಷಿಣ ಕನ್ನಡದ ಇತಿಹಾಸ, ಮಂಗಳೂರು ೧೯೪೮

೧೦) ಗಿರೀಶ್ ಭಟ್ ಅಜಕ್ಕಳ, ಬುದ್ಧಿಜೀವಿ ವರ್ಸಸ್ ಬೌದ್ಧಿಕ ಸ್ವಾತಂತ್ರ್ಯ, ಚಿಂತನ ಬಯಲು, ಮೊಡಂಕಾಪು, ಬಂಟ್ವಾಳ ೨೦೦೭.

೧೧) ಚಿನ್ನಸ್ವಾಮಿ ಸೋಸಲೆ.ಎನ್, ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ಸಿ.ವಿ.ಜಿ. ಪಬ್ಲಿಕೇಷನ್ ಬೆಂಗಳೂರು – ೨೦೦೧,

೧೨) ದೇವಿಪ್ರಸಾದ್.ಎನ್.ಎಸ್,ಸಂಪಾಜೆ (ಸಂ), ಕೊಡಗಿನಲ್ಲಿ ಭಾಷಾ ಸಾಂಸ್ಕೃತಿಕ ಸಾಮರಸ್ಯ, ಅಮರ ಕ್ರಾಂತಿ ಉತ್ಸವ ಸಮಿತಿ, ಸುಳ್ಯ, ದ.ಕ., ೨೦೦೩.

೧೩) ದೇವಿಪ್ರಸಾದ್ ಎನ್.ಎಸ್. ಸಂಪಾಜೆ, ಅಮರ ಸುಳ್ಯದ ಸ್ವಾತಂತ್ರ್ಯ ಸಮರ, ಅಮರ ಕ್ರಾಂತಿ ಸಂಸ್ಮರಣ ಸಮಿತಿ, ಸಂಪಾಜೆ – ೫೭೪೨೩೪, ೨೦೦೫

೧೪) ದೇಸಾಯಿ.ಎ.ಆರ್.(ಸಂ.) ಭಾರತದಲ್ಲಿ ರೈತರ ಹೋರಾಟಗಳು,ವಿ.ವಿ.ಮುದ್ರಣಾಲಯ, ನವದೆಹಲಿ ೧೯೮೫

೧೫) ನಾಯಕ.ಹಾ.ಮಾ. (ಸಂ) 'ಚಿನ್ನದ ಗರಿ', ಕನ್ನಡ ಕಾದಂಬರಿಗಳಲ್ಲಿ ಇತಿಹಾಸ : ಕೊರಟ್ಟಿ ಶ್ರೀನಿವಾಸ ರಾವ್ (ಲೇ)
೧೬) ನಾಗಭೂಷಣ ಡಿ.ಎಸ್. (ಸಂ) ಮಾಸ್ತಿ ಸಾಹಿತ್ಯ ಸಮಗ್ರ ದರ್ಶನ, ಸಂವಾದಿ ಹಳ್ಳಿ, ಮಲ್ಲಾಡಿ ಹಳ್ಳಿ, ೧೯೯೨
೧೭) ನಾವಡ ಎ.ವಿ. ವಸಾಹತುಶಾಹಿ ಮತ್ತು ದೇಶೀಯಾ ಆರ್ಥಿಕತೆಗಳ ಮುಖಾಮುಖಿ ಕೊಡಗು-ಕೆನರಾ ಆರ್ಥಿಕ ಬಂಡಾಯ, ಪಿ.ಹೆಚ್.ಡಿ. ಪ್ರಬಂಧ, ಹಂಪಿ, ಕನ್ನಡ ವಿ.ವಿ. ೨೦೧೧.
೧೮) ನಿರಂಜನ, ಕಲ್ಯಾಣಸ್ವಾಮಿ, ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೫೬,
೧೯) ನಿರಂಜನ, ಸ್ವಾಮಿ ಅಪರಂಪಾರ, ಕಥಾ ಸಾಹಿತ್ಯ, ಬೆಂಗಳೂರು, ೧೯೮೮.
೨೦) ಪ್ರತಿಮಾ ಪಿ.ಎಸ್. ವಸಾಹತುಶಾಹಿ ಮತ್ತು ದೇಶೀಯ ಆರ್ಥಿಕತೆಗಳ ಮುಖಾಮುಖಿ : ಕೊಡಗು-ಕೆನರಾ ಆರ್ಥಿಕ ಬಂಡಾಯ, ಪಿ.ಹೆಚ್.ಡಿ. ಪ್ರಬಂಧ, ಹಂಪಿ ಕನ್ನಡ ವಿ.ವಿ. ೨೦೧೧,
೨೧) ಮೇಟಿ ಮಲ್ಲಿಕಾರ್ಜುನ (ಸಂ.) ಅರುಹು ಕುರುಹು ಪತ್ರಿಕೆ, 'ಮೌನ', ೨೯೯, ನವಿಲು ರಸ್ತೆ, ಕುವೆಂಪು ನಗರ, ಮೈಸೂರು, ಜನವರಿ-ಮಾರ್ಚ್ ಸಂಚಿಕೆ ೨೦೧೩
೨೨) ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಚಿಕ್ಕವೀರ ರಾಜೇಂದ್ರ,
೨೩) ರಾಜಶೇಖರಪ್ಪ. ಬಿ. 'ಇತಿಹಾಸ ಕಥನ' ೨೦೦೧
೨೪) ರಾಜಾರಾಮ ಹೆಗಡೆ, 'ಇತಿಹಾಸದ ಅಧ್ಯಯನ ಏಕೆ ಮತ್ತು ಹೇಗೆ?' ಹೊಸತು, ವಿಶೇಷ ಸಂಚಿಕೆ, ಜನವರಿ ೨೦೦೪
೨೫) ರಿಕ್ತರ್, ಕರ್ನಾಟಕ ಗೆಜೆಟಿಯರ್, ೧೯೮೩
೨೬) ವಿಜಯ್ ಪೂಣಚ್ಚ, ತಂಬಂಡ, ಕೆಳವರ್ಗದ ಪ್ರತಿಭಟನೆ - ಸಬಾಲ್ಟರ್ನ್ ಚರಿತ್ರೆ, ಪ್ರಸಾರಾಂಗ, ಹಂಪಿ ಕನ್ನಡ ವಿಶ್ವವಿದ್ಯಾನಿಲಯ, ೨೦೦೯
೨೭) ವೆಂಕಟರತ್ನ.ಎ.ವಿ., ಡಾ. ಎಂ.ಬಿ. ಪದ್ಮ, ಇತಿಹಾಸ ಸಂಶೋಧನಾ ಮಾರ್ಗ
೨೮) ಶೈಲಾ ಯು. ಪ್ರಾದೇಶಿಕತೆಯೂ ಕಲ್ಲು ಹೇಳುವ ಕಥೆಗಳು, ಶ್ರೀ ಬೆನಕ, ಸುದರ್ಶನ ನಗರ, ಫಜೀರು, ಮಂಗಳಗಂಗೋತ್ರಿ, ೨೦೧೨
೨೯) ಶೈಲಾ ಯು. ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಜ್ಞಾನೋದಯ ಪ್ರಕಾಶಮ, ಬೆಂಗಳೂರು- ೨೦೦೨
೩೦) ಪುರುಷೋತ್ತಮ ಬಿಳಿಮಲೆ, ಸುಳ್ಯ ಪರಿಸರದ ಗೌಡ ಜನಾಂಗ, ಒಂದು ಸಾಂಸ್ಕೃತಿಕ ಅಧ್ಯಯನ, ಮಂಗಳೂರು ವಿ.ವಿ. ೧೯೮೫
೩೧) ಪ್ರಭಾಕರ್ ಶಿಶಿಲ ಅಮರ ಸುಳ್ಯ-ದೇಶದ ಸ್ವಾತಂತ್ರ್ಯ ಸಂಗ್ರಾಮ್, ತರಂಗ, ೨೦೦೭, ಅಗಸ್ಟ್ ೧೯
೩೨) ಪ್ರಭಾಕರ್ ಶಿಶಿಲ, ಕೊಡಗಿನ ಐತಿಹ್ಯ ಕತೆಗಳು, ರಾಜ್ ಪ್ರಕಾಶನ, ಬನ್ನಿ ಮಂಟಪ, ಮೈಸೂರು- ೨೦೧೦

೩೩) ಪ್ರಭಾಕರ್ ಶಿಶಿಲ, ನದಿ ಎರಡರ ನಡುವೆ, ವಸಂತ ಪ್ರಕಾಶನ, ಜಯನಗರ, ಬೆಂಗಳೂರು ೨೦೦೯

೩೪) ಪ್ರಭಾಕರ್ ಶಿಶಿಲ, ಮೂಡನದ ಕೆಂಪು ಕಿರಣ, ರಾಜ್ ಪ್ರಕಾಶನ, ಬನ್ನಿ ಮಂಟಪ, ಮೈಸೂರು- ೨೦೧೦

೩೫) ಫಾಲಾಕ್ಷ, ಪ್ರಪಂಚದ ಇತಿಹಾಸ, ಪು ೨, (ಉದ್ಧೃತ) ಡಾ. ಮೀನಾಕ್ಷಿ ಜಂಗಮನಿ, ಚಾರಿತ್ರಿಕ ಕಾದಂಬರಿ ಸಾಂಸ್ಕೃತಿಕ ಸಂಕಥನ, ರಚನ ಪ್ರಕಾಶನ ಮೈಸೂರು, ೨೦೧೦.

೩೬) ಬರಗೂರು ರಾಮಚಂದ್ರಪ್ಪ (ಪ್ರ.ಸಂ) 'ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ' ಡಾ. ಆರ್. ಶೇಷಶಾಸ್ತ್ರಿ (ಲೇ.) ೧೯೯೩

೩೭) ಬೋಳಂತ ಕೋಡಿ ಈಶ್ವರ ಭಟ್ಟ (ಸಂ) ನಿರಂಜನ ಅಭಿನಂದನ, ಕರ್ನಾಟಕ ಸಂಘ, ಪುತ್ತೂರು, ೧೯೮೬

೩೮) ಭೈರಪ್ಪ.ಎಸ್.ಎಲ್, ವಿಜಯ ಕರ್ನಾಟಕ, ಸಂದರ್ಶನದಲ್ಲಿ (೨೮-೦೧-೨೦೦೩)

೩೯) ಬಾಲಸುಬ್ರಮಣ್ಯಂ ಎಸ್. ಅರಿಸ್ಟಾಟಲ್‌ನ ಕಾವ್ಯಮೀಮಾಂಸೆ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೭೨

೪೦) ಶಿವರಾಮ ಪಡಿಕಲ್, ನಾಡು-ನುಡಿಯ ರೂಪಕ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ದ.ಕ. ೨೦೦೧

೪೧) ಶಿವರುದ್ರಪ್ಪ ಜಿ.ಎಸ್.(ಸಂ) ಮಾಸ್ತಿಯವರ ಸಾಹಿತ್ಯ ಒಂದು ಅಧ್ಯಯನ, ಬೆಂಗಳೂರು ವಿ.ವಿ. ೧೯೮೬

೪೨) ಸಾವಿತ್ರಿ .ಕೆ, ನಂಬಿದ ಸತ್ಯಗಳು (ಪಿ.ಎಚ್.ಡಿ. ಪ್ರಬಂಧ) ಕೆ.ಎಸ್.ಮುದ್ದಣ್ಣ ಸ್ಮಾರಕ ಟ್ರಸ್ಟ್, ಕೃಷ್ಣಾಪುರ ದೊಡ್ಡಿ ೨೦೦೬

ಕೃಪೆ: ಪ್ರತಿಮಾ ಪಿ.ಎಸ್, ವಸಾಹತುಶಾಹಿ ಮತ್ತು ದೇಶೀಯ ಆರ್ಥಿಕತೆಗಳ ಮುಖಾಮುಖಿ : ಕೊಡಗು-ಕೆನರಾ ಆರ್ಥಿಕ ಬಂಡಾಯ

